# ಅಂಕಣ

ಜನವರಿ–ಫೆಬ್ರವರಿ 1984

ಪ್ರಾಚೀನ ರಂಗಭೂಮಿ

ಕ. ವೆಂ. ರಾಜಗೋಪಾಲ

'ವಯಸ್ಸು, ವಿವೇಕ ಮತ್ತು ಜೀವನ ಚಕ್ರ'

ಎಲಿಜಬೆತ್ ಹಾಲ್ ಕನ್ನಡಕ್ಕೆ : ಡಾ|| ಬಿ. ಶಶಿಧರ

ಬಿ. ಪುಟ್ಟಸ್ವಾಮಯ್ಯನವರ ನಿಧನದ ಬಗ್ಗೆ

ಡಾ|| ಶಂ. ಮೊಕಾಶಿ–ಪುಣೇಕರ

ಕರಿಮಣ್ಣಿನ ಗೊಂಬೆಗಳು

ಡಾ|| ಬಸವರಾಜ ಕಲ್ಗುಡಿ

ಆತ್ಮಹತ್ಯೆ : ಸಾಮಾಜಿಕ ವಿಶ್ಲೇಷಣೆ

ಡಾ|| ಎಂ. ಎಸ್. ವಿಘ್ನೇಶ್

ಅಂಕಣ

ಜನವರಿ–ಫೆಬ್ರವರಿ 1984 ಸಂಪುಟ–5 ಸಂಚಿಕೆ–3

ಪ್ರೊ|| ಎ. ಎನ್. ಮೂರ್ತಿರಾಯರು ಕೋಲಾರ ಜಿಲ್ಲೆಯ ಕೈವಾರದಲ್ಲಿ ನಡೆದ 56ನೆಯ ಸಾಹಿತ್ಯ ಸಮ್ಮೇಳದ ಅಧ್ಯಕ್ಷರಾಗಿದ್ದಾರೆ. ಸದ್ದುಗದ್ದಲವಿಲ್ಲದೆ ಸಾಹಿತ್ಯ ಕೃಷಿಯನ್ನು ನಡೆಸಿದ ಹಿರಿಯರನ್ನು ಅಧ್ಯಕ್ಷರನ್ನಾಗಿ ಮಾಡಿದ್ದು ಸಂತೋಷ. ಪ್ರೊ|| ವಿ. ಕೆ. ಆರ್. ವಿ. ರಾವ್ ರಾಷ್ಟ್ರೀಯ ಪ್ರಾಧ್ಯಾಪಕರಾಗಿ ನೇಮಕಗೊಂಡಿದ್ದಾರೆ. ಇವರಿಬ್ಬರಿಗೆ 'ಅಂಕಣ'ದ ಅಭಿನಂದನೆಗಳು.

ವೃತ್ತಿರಂಗಭೂಮಿಗೆ ಶ್ರೇಷ್ಠ ನಾಟಕಗಳನ್ನು ನೀಡಿ, ಅನಂತರ ಶ್ರೇಷ್ಠ ಐತಿಹಾಸಿಕ ಕಾದಂಬರಿಯಾದ 'ಕ್ರಾಂತಿ ಕಲ್ಯಾಣ' ನೀಡಿದ ಬಿ. ಪುಟ್ಟಸ್ವಾಮಯ್ಯನವರು ನಿಧನರಾಗಿದ್ದಾರೆ. ಕನ್ನಡದ ಗದ್ಯಬರಹಕ್ಕೆ ಶಕ್ತಿಯನ್ನು ತುಂಬಿದ, ಹೆಸರಾಂತ ಕಾದಂಬರಿಗಾರ ತ.ರಾ.ಸು. ಇನ್ನಿಲ್ಲ. ಇವರಿಬ್ಬರ ನಿಧನದಿಂದ ಕನ್ನಡ ಕಾದಂಬರಿ ಕ್ಷೇತ್ರ ಶ್ರೇಷ್ಠ ಐತಿಹಾಸಿಕ ಕಾದಂಬರಿಕಾರರನ್ನು ಕಳೆದುಕೊಂಡಿದೆ ಕನ್ನಡ ಜನತೆಯ ವಾಚನಾಅಭಿರುಚಿಯನ್ನು ಹೆಚ್ಚಿಸಿದ ಈ ನಾಡೋಜರಿಗೆ 'ಅಂಕಣ'ದ ನಮನ.

ಮುಂಬಯಿ ಕನ್ನಡಿಗರು 'ಸೃಜನವೇದಿ' ಎಂಬ ಕಿರು ಸಾಹಿತ್ಯ ಪತ್ರಿಕೆಯನ್ನು ಪ್ರಾರಂಭಿಸಿದ್ದಾರೆ ಈ ಪತ್ರಿಕೆಗೆ 'ಅಂಕಣ'ದ ಸ್ವಾಗತ.

'ಅಂಕಣ'

8, 'ಚಿರಂಜೀವಿ', ಹಳೇ ಈಜುಕೊಳದ ರಸ್ತೆ, ಕೋದಂಡರಾಮಪುರ, ಬೆಂಗಳೂರು-560 003

## ಈ ಸಂಚಿಕೆಯಲ್ಲಿ

### ಲೇಖನಗಳು

ಪ್ರಾಚೀನ ರಂಗಭೂಮಿ/1/ಕ. ವೆಂ. ರಾಜಗೋಪಾಲ
'ವಯಸ್ಸು, ವಿವೇಕ ಮತ್ತು ಜೀವನ ಚಕ್ರ'/9/ಎಲಿಜಬೆತ್‌ಹಾಲ್, ಕನ್ನಡಕ್ಕೆ ಡಾ|| ಬಿ. ಶಶಿಧರ
ಆತ್ಮಹತ್ಯೆ : ಸಾಮಾಜಿಕ ವಿಶ್ಲೇಷಣೆ/20/ಎಂ. ಎಸ್. ವಿಘ್ನೇಶ್
ಬಿ ಪುಟ್ಟಸ್ವಾಮಯ್ಯನವರ ನಿಧನದ ಬಗ್ಗೆ/25/ಡಾ|| ಶಂ. ಮೊಕಾಶಿ–ಪುಣೇಕರ
ಕರಿಮಣ್ಣಿನ ಗೊಂಬೆಗಳು/27/ಡಾ|| ಬಸವರಾಜ ಕಲ್ಗುಡಿ

ಪ್ರಕಟಣೆ : 'ಪಿ.ಪಿ.' ಬಳಗದ ಗೆಳೆಯರಿಂದ
ವಾರ್ಷಿಕ ಚಂದಾ : ಹತ್ತು ರೂಪಾಯಿ
'ಅಂಕಣ' ಸ್ಥಾಯಿನಿಧಿ : ನೂರು ರೂಪಾಯಿ

# ಪ್ರಾಕೃತ ರಂಗಭೂಮಿ

ಕ. ವೆಂ. ರಾಜಗೋಪಾಲ

ಸಂಸ್ಕೃತ ನಾಟಕಕಾರರಲ್ಲಿ ಅಶ್ವಘೋಷನು ಮೊದಲಿಗನೆಂದು ಡಿ.ಡಿ. ಕೊಸಾಂಬಿ
ಗುರುತಿಸುತ್ತಾನೆ. ಅವನು ಬರೆದ ಕೃತಿ 'ಸಾರಿಪುತ್ತ ಪ್ರಕರಣ' ಪೂರ್ಣವಾಗಿ
ದೊರಕಿಲ್ಲವಾದರೂ ಅದು ಸಂಸ್ಕೃತ ನಾಟಕದ ಸಂಪ್ರದಾಯಕ್ಕೆ ಸೇರುವುದಲ್ಲದೆ ಸೂತ್ರ
ಧಾರ ಮತ್ತು ವಿದೂಷಕರನ್ನು ಒಳಗೊಂಡಿರುವುದೂ ಆಗಿದೆ. ಇದರ ಪೂರ್ವರಂಗ
ವನ್ನು ಯಾರೂ ಸರಿಯಾಗಿ ಪರಿಶೀಲಿಸಿದಂತೆ ಕಾಣುವುದಿಲ್ಲ. ಆದರೂ ಭರತನ
'ನಾಟ್ಯಶಾಸ್ತ್ರ'ಕ್ಕೆ ಅನುಗುಣವಾದುದೆಂದರೆ ಒಪ್ಪಿಕೊಳ್ಳಬಹುದು–

ಇಂತಹ ರೂಪಕಗಳಲ್ಲಿ ನಾಟ್ಯಶಾಸ್ತ್ರದ ದಶರೂಪಕಗಳಲ್ಲಿ 'ಪ್ರಕರಣ'
ಎಂಬುದೂ ಮುಖ್ಯ. ಇದೇ 'ನಾಟಕ'ವೆಂಬುದಲ್ಲ. ಆದರೂ 'ಮೃಚ್ಛಕಟಿಕ
ಪ್ರಕರಣ'ಕ್ಕೆ ಆಧಾರಭೂತವಾದ ರೂಪಕವೆಂಬುದನ್ನು ('ದರಿದ್ರ ಚಾರುದತ್ತ'
ಎಂಬುದು ವಾಸ್ತವಿಕ ಆಧಾರ) ಗುರುತಿಸುವುದಾದರೆ 'ಪ್ರಕರಣ'ದ ಹಿರಿಮೆಯನ್ನೂ
ಅರ್ಥಮಾಡಿಕೊಳ್ಳಬಹುದು. ಅಲ್ಲದೆ ಸಂಸ್ಕೃತ ನಾಟಕ ಸಂಪ್ರದಾಯದಲ್ಲಿ 'ಬೌದ್ಧ
ಕಥಾನಕ'ವಿರುವುದಂತೂ ಸ್ಪಷ್ಟವಾಗುತ್ತದೆ. ನನ್ನ ಹಿಂದಿನ ಲೇಖನಗಳಲ್ಲಿ :
(ಅಂಕಣ)....'ಕರ್ಣಭಾರ'ಕ್ಕೆ 'ಸಿಬಿಜಾತಕ'ದ 'ನಮೂನೆ'ಯು ವಸ್ತುವನ್ನು ನೀಡಿರು
ವುದಲ್ಲದೆ ರೂಪಕದ ಚೌಕಟ್ಟಿಗೂ ಆಧಾರವಾಗಿದೆ ಎಂಬುದನ್ನು ಪ್ರತಿಪಾದಿಸಿದ್ದೇನೆ.
ಆ ಮೂಲಕ ಸಂಸ್ಕೃತ ನಾಟಕಗಳ ಸಂಪ್ರದಾಯಕ್ಕೆ ಮುಂಚಿತವಾಗಿ 'ಪ್ರಾಕೃತ ರಂಗ
ಭೂಮಿ' ಮತ್ತು ರೂಪಕಗಳು ಬಳಕೆಯಲ್ಲಿದ್ದಿರಬಹುದೆಂದು ತೋರುತ್ತದೆ. ಈ
'ರಂಗ ಮಂಟಪ' (ನಾಟ್ಯ ಶಾಸ್ತ್ರದ ಪದ)ದಲ್ಲಿ ಅದರಲ್ಲೂ ಬೌದ್ಧ ವಾತಾವರಣದಲ್ಲಿ
ಪ್ರಾಕೃತ ರೂಪಕಗಳು ಒಂದಲ್ಲ ಒಂದು ರೀತಿಯಲ್ಲಿ ಜೀವಂತವಾಗಿದ್ದಿರಬಹುದು. ಅಲ್ಲದೆ
ಮಹಾಯಾನ ಪಂಥವು ಪ್ರಾಕೃತವನ್ನೂ ಸಂಸ್ಕೃತವನ್ನೂ ಸಮಾನವಾಗಿ ಒಪ್ಪಿ
ಕೊಂಡಂತೆ ಹಳೆಯ ಶಾಸನಗಳನ್ನೂ ಸಂಸ್ಕೃತಕ್ಕೆ ಅನುವಾದಿಸಿದುದನ್ನು 'ಕಾರ್ಲ'
ಮೊದಲಾದ ಗುಹಾಂತರ ದೇವಾಲಯಗಳಲ್ಲಿ ಸು. ಕ್ರಿ.ಶ.ದ ಪ್ರಾರಂಭದ ದಿನಗಳಲ್ಲಿಯೇ
ಕಾಣುತ್ತೇವಾದುದರಿಂದ ಅಂಥ ಪ್ರಾಕೃತ ಕೃತಿಗಳನ್ನೂ ಸಂಸ್ಕೃತಕ್ಕೆ ರೂಪಾಂತರಿಸಲು
ಸಹಜವಾದ ಉತ್ತೇಜನ ನೀಡುತ್ತಿದ್ದಿರಬೇಕೆಂದು ಅರ್ಥಮಾಡಿಕೊಳ್ಳಲು ನ್ಯಾಯವಾದ
ಅವಕಾಶವೂ ಇರುತ್ತದೆ. ಆದರೆ ಸಂಸ್ಕೃತವನ್ನು (ಪಾಣಿನೀ ವ್ಯಾಕರಣವು ಖಚಿತ
ಪಡಿಸಿ, ಪತಂಜಲಿಯು ಅದನ್ನು ವ್ಯಾಖ್ಯಾನಿಸಿದ ಮೇಲಂತೂ) ಅನುಸರಿಸುವುದರಲ್ಲಿ
ಒಂದು ಸಾಮಾನ್ಯ ಭಾಷೆಯು ಇಡೀ ದೇಶಾದ್ಯಂತಕ್ಕೆ ದೊರಕುವ ಅವಕಾಶವುಂಟಾದು

ದರಿಂದ ಪ್ರಾಕೃತವು ಕೇವಲ ಧಾರ್ಮಿಕ ಕೃತಿಗಳಿಗೆ ಉಳಿದು ಬೇರೆಯದಕ್ಕೆಲ್ಲಾ (ಅಂದರೆ ಇತಿಹಾಸ, ಪುರಾಣ, ಆಗಮ, ಸಾಹಿತ್ಯ ಮತ್ತು ಹಲವಾರು ಶಾಸ್ತ್ರಗಳಿಗೆ) ಸಂಸ್ಕೃತವು ಬಳಕೆಯಾಗಿರುತ್ತದೆ. ಬ್ರಾಹ್ಮಣರು ಬಳಸಿದ ಮತ್ತು ಬಳಕೆಗೆ ತಂದ ಈ ಭಾಷೆಯಿಂದ ಪ್ರಯೋಜನವಾದುದನ್ನು ಇಂದಿಗೂ ಗುರುತಿಸಲು ಸಾಧ್ಯವಿದೆ. ಆದುದ ರಿಂದ ಇಂಥ ವ್ಯಾಪಕತೆಯುಳ್ಳ ಪ್ರಯೋಜನಕಾರಿ ಭಾಷೆಯು(ಸಂಸತ್ಕೃವಾಗಿ) ಪ್ರಾಕೃತ ರಂಗಭೂಮಿಯನ್ನೂ ಸುಲಭವಾಗಿ ಹಿಂದಕ್ಕೆ ಹಾಕುವುದನ್ನು ಕಾಣುತ್ತೇವೆ.

ಹೀಗೆ ಭಾರತದ ಪ್ರಾಕೃತ ಭಾಷೆಯ ಜಾಗದಲ್ಲಿ ಸಂಸ್ಕೃತವು ಅಧಿಕೃತ ಭಾಷೆ ಯಾದುದಲ್ಲದೆ ರಾಜಸಭೆಯ ಭಾಷೆಯಾದುದರಿಂದ ಅದರ ಘನತೆಯು ಹೆಚ್ಚಾಗುತ್ತಾ ಹೋಗಿ ಬ್ರಾಹ್ಮಣರು ಸಂಚರಿಸುತ್ತಾ ಅಗ್ರಹಾರಗಳನ್ನು ಸ್ಥಾಪಿಸುತ್ತಾ ಹೋದಂತೆ ರಾಜಶಾಸನಗಳ ಭಾಷೆಯೂ ಆಗಿರುವುದನ್ನು ಅರ್ಥಮಾಡಿಕೊಂಡಲ್ಲಿ ಪ್ರಾಕೃತ ರಂಗ ಭೂಮಿಯೂ ಸಂಸ್ಕೃತ ರಂಗಭೂಮಿಯಾಗಿ ಮಾರ್ಪಟ್ಟಿರುವ ಸಾಧ್ಯತೆಯು ಅರ್ಥ ವಾದೀತು. ಅಲ್ಲದೆ ಇಂತಹ ಬ್ರಾಹ್ಮಣ ಪ್ರಯತ್ನದಿಂದ ಸಂಸ್ಕೃತ ಪುನರುತ್ಥಾನವು ಇಡೀ ಭಾರತದಲ್ಲಿ ಒಡಮೂಡಲು ಸಾಧ್ಯವಾಗಿ ಸಂಸ್ಕೃತ ಸಾಹಿತ್ಯದ ಯುಗವು ಅಭಿವೃದ್ಧಿಯಾಯಿತೆಂದು ಹೇಳಬೇಕಾಗುತ್ತದೆ. ಇಂತಹ ವಾತಾವರಣದಲ್ಲಿಯೇ ಸಂಸ್ಕೃತದ ಕಾಳಿದಾಸಾದಿಗಳು ಹುಟ್ಟಿದರೆಂಬುದಂತೂ ಆಶ್ಚರ್ಯರಹಿತವಾದ ವಿಷಯ ವಾಗುತ್ತದೆ.

ಹಾಗಾದರೆ ಪ್ರಾಕೃತ ರೂಪಕಗಳಿಗೆ ರಂಗಮಂಟಪಗಳು ಎಲ್ಲಿ ಮತ್ತು ಹೇಗೆ ಇದ್ದು ವೆಂದು ಗುರುತು ಮಾಡುವ ಪ್ರಯತ್ನವು ನ್ಯಾಯವಾಗುತ್ತದೆ– ಬೌದ್ಧ ಮತ್ತು ಜೈನ ಮತಗಳು ಹುಟ್ಟಿ ಪ್ರಭಾವ ಬೀರತೊಡಗಿದಾಗ ಪ್ರಾಕೃತ ಭಾಷೆಗಳಿಗೆ (ಜನಸಾಮಾನ್ಯತೆ ಯಿದ್ದುದರಿಂದ) ಧಾರ್ಮಿಕವಾದ ಅವಕಾಶದೊರೆತುದನ್ನು ಕಾಣುತ್ತೇವೆ. ಏಕೆಂದರೆ ಇವು ಗಳನ್ನು ಜನ ವ್ಯಾಕರಣವನ್ನು ಅಭ್ಯಾಸಮಾಡದೆ ಅರ್ಥಮಾಡಿಕೊಳ್ಳಲು ಅನುಕೂಲ ವಾಗುತ್ತಿದ್ದಿರಬೇಕು. ಆದುದರಿಂದ ಧಾರ್ಮಿಕ ಚಿಂತನೆಗೂ ಆತಂಕವಿಲ್ಲದಂತಾಗಿದ್ದು ಧಾರ್ಮಿಕ ಪ್ರಸಾರವಂತೂ ಜನತೆಯನ್ನು ಮುಟ್ಟುತ್ತಿದ್ದಿರಬೇಕು. ಇದೇ ಕಾರಣ ದಿಂದ ಅಂದಿನ ರಾಜಮಹಾರಾಜರು ಬೌದ್ಧ (ಅಥವಾ ಜೈನ) ಧರ್ಮಕ್ಕೆ ಬೆಂಬಲ ಕೊಡತೊಡಗಿರಬೇಕು. ಇದನ್ನು ಅಶೋಕನ ಕಾಲದವರೆಗೂ ನಿಶ್ಚಿತವಾಗಿ ಕಾಣ ಬಹುದು. ಆದುದರಿಂದ ಸಾಮಾನ್ಯ ಜನತೆಯ ಚಲಾವಣೆಯಲ್ಲಿದ್ದ ಪ್ರಾಕೃತಗಳು ಅಂದಿನ ಶಾಸನಗಳಲ್ಲಿ ರೂಪತಾಳಿವೆ. ಕಲೆಗಳಿಗೆ ಆಧಾರವಾಗಿವೆ, ರಾಜಾಡಳಿತಕ್ಕೂ ಅನುಕೂಲವಾಗಿದ್ದಿರಬೇಕು. ಈ ಬಗೆಯನ್ನೇ ಭಾಸ ಮೊದಲಾಗಿ ಸಂಸ್ಕೃತ ಯುಗದ ಕವಿಗಳ ರಚನೆಗಳಲ್ಲೆಲ್ಲಾ ಕಾಣುತ್ತೇವೆ. ಇಂತಹ ಅರಿವಿಲ್ಲದೆ ಹೋದಲ್ಲಿ ಸಂಸ್ಕೃತ ನಾಟಕಗಳಲ್ಲಿನ ಸಾಮಾನ್ಯ ಪಾತ್ರಗಳೂ ಸ್ತ್ರೀಯರೂ ಏಕೆ ಪ್ರಾಕೃತವನ್ನಾಡುತ್ತಾ ರೆಂಬುದು ಅರ್ಥವಾಗಲಾರದು. ದೊರೆ ಮತ್ತು ಪಂಡಿತರು ರಾಜಕಾರ್ಯದ ಗಂಭೀರತೆ ಯನ್ನು ಕಾಪಾಡುವವರಂತೆ ಮತ್ತು ಸಂಸ್ಕೃತವು ಕಳೆದುಕೊಂಡಿದ್ದ Classical

Privilageನ್ನು ಕಡೆಗಣಿಸಲಾಗದವರಂತೆ ಸಂಸ್ಕೃತವನ್ನು ಬಳಸುವ ರೀತಿಯನ್ನು ಅರಿಯಬಹುದು. ಬಹುಶಃ ಪಾಣಿನೀ ಮತ್ತು ಮಹಾಯಾನಾ ಪಂಥಗಳು (ಇವೆರಡೂ ವಿರುದ್ಧ ಧಾರ್ಮಿಕ ಸಂಪ್ರದಾಯುಗಳಿಗೆ ಸೇರಿದ್ದವು) ಕಾಣಿಸಿಕೊಳ್ಳದಿದ್ದರೆ ಮತ್ತೆ ಸಂಸ್ಕೃತ ಸಾಹಿತ್ಯ ಯುಗವೊಂದು ಒಡಮೂಡುತ್ತಿರಲಿಲ್ಲ ಎನ್ನಿಸುತ್ತದೆ. ಆದುದರಿಂದ ಪ್ರಾಕೃತ ಭಾಷೆಗಳಿಗೆ ಧಾರ್ಮಿಕ ಹಾಗೂ ರಾಜ್ಯಾಡಳಿತದ ಮನ್ನಣೆಯಿದ್ದಾಗ ಎಲ್ಲಾ ಕಲೆಗಳೂ ಅವುಗಳನ್ನು ಆಶ್ರಯಿಸರಲೇಬೇಕೆಂಬುದು ಖಚಿತವಾದೀತು– ಆಗ ಸಂಸ್ಕೃತ ನಾಟಕಗಳಿಗೆ ಮುಂಚೆ ಬಲವಾಗಿದ್ದ ಮತ್ತು ಬಳಕೆಯಲ್ಲಿದ್ದ ಪ್ರಾಕೃತ ಯುಗದಲ್ಲಿ 'ಪ್ರಾಕೃತ ರೂಪಕ'ಗಳು ಬಳಕೆಯಲ್ಲಿದ್ದಿರಬೇಕೆಂಬುದು ಬರಿಯ ಊಹೆಯಾಗಲಾರದು.

'ಪ್ರಾಕೃತ ರೂಪಕ'ಗಳೇ ಯಾಕಿರಬೇಕು ಎನ್ನುವುದಕ್ಕೆ ವಿವರಣೆಯನ್ನೂ ಕೊಡಬಹುದು. ಕ್ರಿ.ಪೂ. ಆರನೆಯ ಶತಮಾನದಿಂದ ಕ್ರಿ. ಶ.ದ ವರೆಗೂ ಹಲವು ಬಗೆಯ ಜನಪ್ರಿಯ ಕಲೆಗಳು ಜೀವಂತವಾಗಿದ್ದುವೆಂಬುದಕ್ಕೆ ಜಾತಕ ಕಥೆಗಳು, ಕೌಟಿಲ್ಯ ಮತ್ತು ಬೌದ್ಧ-ಜೈನ ಧಾರ್ಮಿಕ ಕೃತಿಗಳು ಆಧಾರವಾಗುತ್ತವೆ. ಆಗ ಹಾಡುಗಾರಿಕೆ, ನರ್ತನ, ದೊಂಬರಾಟ ಮತ್ತು ಅಭಿನಯ ಕಲೆಗಳು ಧಾರ್ಮಿಕವಾಗಿ (ಬೌದ್ಧ-ಜೈನ ಯತಿಗಳಿಗೆ) ವರ್ಜ್ಯವಾಗಿದ್ದರೂ ಜನಜೀವನಕ್ಕೆ ಅವು ಮನರಂಜನೆಗೆ ಬಳಕೆಯಾಗುತ್ತಿದ್ದುವೆಂಬುದೂ ತಿಳಿದುಬರುತ್ತದೆ. ಅಲ್ಲದೆ 'ಸಮಜ್ಜ'ಗಳು ಇಂದಿನ ಜಾತ್ರೆಗಳಂತೆ ಕಲೆಗಳಿಗೆ ಆಧಾರವಾಗಿದ್ದುವೆಂಬುದೂ ತಿಳಿದುಬರುತ್ತದೆ. ಅಂದಮೇಲೆ ಈ ಕಲೆಗಳ ಪ್ರದರ್ಶನಕ್ಕೆ ನಿಶ್ಚಿತವಾದ ಮಂಟಪಗಳೋ ಜಗಲಿಗಳೋ ಅಥವಾ ಜನ ರೆಲ್ಲಾ ನೋಡುವುದಕ್ಕೆ ಸೇರಲು ಅನುಕೂಲವಾದ ಸ್ಥಳಾವಕಾಶವೋ ಇದ್ದಿರಲೇಬೇಕಾ ಗುತ್ತದೆ. ಇದರ ಜೊತೆಗೆ ಬೌದ್ಧ–ಜೈನ ಯತಿಗಳಿಗೆ ಧಾರ್ಮಿಕವಾಗಿ ಅನುಕೂಲ ವಾಗುವ ಮತ್ತು ನಿಷಿದ್ಧವಾಗದ ರೀತಿಯ ಪ್ರದರ್ಶನಗಳು ಇದ್ದಿರಬೇಕಾಗುತ್ತವೆ. ಇಂತಹ ಒಂದು ಆವಶ್ಯಕತೆಯನ್ನು ಪೂರಯಿಸಲು ಬುದ್ಧನ ಜಾತಕಗಳು ಬೆಳೆದು ಕೊಂಡು 'ಬುದ್ಧ'ನನ್ನು ಸುತ್ತುವರಿದು ಆ ವ್ಯಕ್ತಿತ್ವವನ್ನು ಕಾಪಾಡುತ್ತಿದ್ದವೆಂಬುದು ಸ್ಪಷ್ಟವಾಗುವುದರಿಂದ ಒಂದು ಬಗೆಯ (ಆಧ್ಯಾತ್ಮಿಕತೆಯ) ಧಾರ್ಮಿಕ ಪ್ರಸಾರವನ್ನು ಸಾಧಿಸಬಲ್ಲ ಕಲಾವಂತಿಕೆ ಬಳಕೆಯಲ್ಲಿದ್ದಿರಬೇಕೆಂದು ಹೇಳಿದರೆ ತಪ್ಪಾಗಲಾರದು. (ಈ ವಿಚಾರವನ್ನು ಹಿಂದಿನ ಎರಡು ಲೇಖನಗಳಲ್ಲಿಯೂ ಪ್ರತಿಪಾದಿಸಿದ್ದೇನೆ.) ಆದುದ ರಿಂದ ಖಾರವೇಲನ 'ಉದಯ ಗಿರಿ'ಯಲ್ಲಾಗಲಿ ನಾಗಾರ್ಜುನ ಕೊಂಡದ ಬೌದ್ಧ ಧಾರ್ಮಿಕ 'ಮಠ'ದಲ್ಲಾಗಲಿ 'ರಂಗಭೂಮಿ'ಯನ್ನು ಗುರುತಿಸುವುದು ನ್ಯಾಯವಾಗು ತ್ತದೆ.

ಇವೆರಡೂ ಕ್ಷೇತ್ರಗಳಲ್ಲಿ ಕಲೆಗಳ ಚಟುವಟಿಕೆಯು ಒಂದು ಶತಮಾನವಾದರೂ ಬಲವಾಗಿದ್ದು ಅದರ ಆವಶ್ಯಕತೆಯನ್ನು ಪೂರಯಿಸಲು 'ರಂಗಸ್ಥಲ'ಗಳು ರಚಿತವಾಗಿರ ಬೇಕಾಗುತ್ತದೆ.

ನಾಗಾರ್ಜುನ ಕೊಂಡದ ರಂಗಭೂಮಿ–ಕೆಲವು ವರ್ಷಗಳ ಹಿಂದೆ ನಾನು ಮತ್ತು

ನನ್ನ ಗೆಳೆಯ 'ಪುವ್ಯಾಶ್ರೀ' ಇಬ್ಬರೂ ಹೈದರಾಬಾದ್‌ನಿಂದ ನಾಗಾರ್ಜುನ ಕೊಂಡಕ್ಕೆ ಹೋಗಿಬಂದಿದ್ದೇವೆ. ಆ ವೇಳೆಗೇ ಅಲ್ಲಿಯ ರಂಗಮಂದಿರದ ಅವಶೇಷವನ್ನು ಆ ಕಣಿವೆಯಿಂದ ವರ್ಗಾಯಿಸಿ ಈಗಿರುವಂತೆ ದಂಡೆಯ ಮೇಲಿನ ಇಳಿಜಾರಿನಲ್ಲಿ ಪುನರ್ರಚಿಸಿದ್ದರು– ಇದರ ಶೋಧನೆಯನ್ನು ಸುಪ್ರಸಿದ್ಧ ಎಂಜಿನಿಯರುಗಳೂ ಸಂಶೋಧಕರೂ ಗುರುತಿಸಿದ್ದಾರೆ. ಇದು ಒಂದು 'ರಂಗಮಂದಿರ'ವೇ ಇರಬೇಕೆಂಬುದನ್ನು ಆಗಸ್ಟ್ 1954ರಲ್ಲಿ ನಡೆದ ಸಂಶೋಧನೆಯ ಫಲವನ್ನು ದಕ್ಷಿಣ ಭಾರತದ ಆರ್ಕಿಯಲಾಜಿಕಲ್ ಸಂಸ್ಥೆಯು ಪ್ರಕಟಿಸಿದೆ. (Indian Archaeology 1954-55) ಇದರಲ್ಲಿ ಎರಡು ಅಂಶಗಳು ಮುಖ್ಯ. 1. ನಾಗಾರ್ಜುನಕೊಂಡಕ್ಕೆ ಸೇರಿದಂತೆ ಹಾರೀತಿಯ ಗುಡಿಯೊಂದು ಇರುತ್ತದೆ. 2. ಈ ರಂಗಮಂದಿರದ ಹಾಳತದಲ್ಲಿ''ಧ್ವನಿ ನಿಯಂತ್ರಣದ' ಲಕ್ಷಣಗಳಿವೆ (Controle of echoe system) ಇದರ ಗುರುತು ಹಚ್ಚಿದವರು ಡಾ। ಆರ್. ಸುಬ್ರಮಣ್ಯಂ. ಇಂತಹ ನಿಯಂತ್ರಣವನ್ನು ಗ್ರೀಕ್ ರಂಗಮಂದಿರದಲ್ಲಿ ವಿದ್ವಾಂಸರು ಸು. 1920ರ ವೇಳೆಗೆ ಗುರುತು ಮಾಡಿದ್ದಾರೆ. ಅಲ್ಲದೆ ಅಂತಹ ಅವಶೇಷವನ್ನು ಪುನರ್‌ನಿರ್ಮಿಸಿ 'ಈಡಿಪಸ್ ದೊರೆ' ನಾಟಕದ ಪ್ರಯೋಗವನ್ನೂ ಸಾಧಿಸಿದ್ದಾರೆ. ಇಂತಹ ಧ್ವನಿ ನಿಯಂತ್ರಣವನ್ನು ಪ್ರಯೋಜನವನ್ನೂ ಕರ್ನಾಟಕದಲ್ಲಿ ಬಾದಾಮಿಯ ಗುಹೆಗಳು ಮತ್ತು ಎದುರುಗುಡ್ಡದ ನಡುವೆ ಸಹಜವಾಗಿರುವಂತೆ ಕಾಣುತ್ತದೆ. ಗುಲ್ಬರ್ಗದ ಕೋಟೆಯಲ್ಲಿ ದರ್ಬಾರಿನ ಮಂಟಪದಲ್ಲೂ ಗೋಲ್ಕೊಂಡದಲ್ಲಿ ಸುದ್ದಿ ಪ್ರಸಾರಕ್ಕೆನ್ನುವಂತೆ ಹೆಚ್ಚು ತಾಂತ್ರಿಕವಾಗಿಯೂ ಬಳಸುತ್ತಿದ್ದರೆಂಬುದಕ್ಕೆ ಮಾಹಿತಿ ದೊರಕುತ್ತದೆ. ಆದರೂ ರಂಗಮಂದಿರದ ವಿಷಯದಲ್ಲಿ ನಾಗಾರ್ಜುನ ಕೊಂಡದ Amphe Theatre ಮಾತ್ರವೇ ಕಂಡುಬರುತ್ತಿದೆ.

ಧ್ವನಿ ಪ್ರಸಾರದ ಅನುಕೂಲವಿಲ್ಲದಿದ್ದರೆ ರಂಗಮಂದಿರಗಳು ಅಪ್ರಯೋಜಕವಾಗುತ್ತವೆ. ಶ್ರೀ ಎಂ. ಎಲ್. ವರದಪಾಂಡೇ ಎಂಬ ವಿದ್ವಾಂಸರು ತಮ್ಮ Traditions of Indian Theatre (1979) ಗ್ರಂಥದಲ್ಲಿ ಈ ರಂಗಭೂಮಿಯ ಅವಶೇಷವನ್ನು ಕುರಿತು ವಿವರಣೆ ನೀಡಿದ್ದಾರೆ. ಇದರ ಕಾಲ ಸುಮಾರಿಗೆ ಇಕ್ಷ್ವಾಕು ರಾಜ, ಮಾಧವಿ ಪುತ್ರ ಶ್ರೀ ವೀರಪುರಿಸದತ್ತ, ತನ್ನ 25 ವರ್ಷ ಕಾಲದ ರಾಜ್ಯ ಭಾರದಲ್ಲಿ(ಕ್ರಿ.ಶ. 250 ರಿಂದ 275) ಇದನ್ನು ಕಟ್ಟಿಸಿರಬೇಕೆಂದು ಹೇಳುತ್ತಾರೆ. ಇದರ ಉದ್ದ × ಅಗಲ × ಎತ್ತರ 55' × 46' × 35' ಎಂದಿದ್ದಾರೆ. ಅವರ ಪ್ರಕಾರ ಇದೊಂದು ಬಯಲು ರಂಗಭೂಮಿ. ರಾಜ ಪರಿವಾರಕ್ಕೆ ಮೇಲುಭಾಗದಲ್ಲಿ ವಿಶೇಷ ಚೌಕಟ್ಟನ್ನು ನಿರ್ಮಿಸಿದಂತೆಯೂ ತೋರುತ್ತದೆ. ಆದುದರಿಂದ ಇದರ ಕೆಲವು ಭಾಗವಾದರೂ ಸೂರನ್ನು ತಡೆದಿರಬಹುದು. ಅಂತೆಯೇ ರಂಗಮಂಟಪದ ಮೇಲೂ ಸೂರಿರಬಹುದು. ಕ್ರಿ.ಶ.ದ ಪ್ರಾರಂಭದ ದಿನಗಳಲ್ಲಿಯೇ ಪರದೆಗಳ ಬಳಕೆಯಿದ್ದುದರಿಂದ ಅಂತಹ ಅನುಕೂಲವನ್ನು ಇಲ್ಲಿ ಗುರುತಿಸಲು ಸಾಧ್ಯವಾಗಿಲ್ಲ. ಸಂಸ್ಕೃತ ನಾಟಕಗಳಲ್ಲಿ ಅಶ್ವಘೋಷನಲ್ಲಿ ಕೂಡ

ಪರದೆಯ ವಿಷಯವು (ನಾಟ್ಯ ಶಾಸ್ತ್ರದಲ್ಲಿಯೂ) ಬರುವುದರಿಂದ ರಂಗಸಜ್ಜಿಕೆಗೆ ಅವಕ್ಲಾಶ ವಿದ್ದಿರಬಹುದು. ಆ ಭಾಗವೆಲ್ಲಾ ಈಗ ಕಣ್ಮರೆಯಾಗಿರುವುದಂತೂ ಸಾಧ್ಯವಿದೆ.

ಪ್ರೇಕ್ಷಕರಿಗಾಗಿ ರಚಿತವಾಗಿರುವ 'ಸೋಪಾನ ಮಾದರಿ'ಯನ್ನು ಗಮನಿಸಿದರೆ ಸುಮಾರು 1,000 ಮಂದಿ ಕುಳಿತುಕೊಳ್ಳಬಹುದು—ಎನ್ನಿಸುತ್ತದೆ; ಕೊನೆಗೆ 500–600 ಮಂದಿಗಾದರೂ ಸಾಧ್ಯವಿದೆ.

ಪ್ರದರ್ಶನಗಳಿಗೆ, ಸಿಂಹಳ ನೇಪಾಳಗಳಂಥ ದೂರ ಪ್ರಾಂತ್ಯಗಳಿಂದಲೂ ಬಂದು ಅಭ್ಯಾಸದಲ್ಲಿದ್ದ ಭಿಕ್ಷುಗಳು ಬರುತ್ತಿದ್ದುದಲ್ಲದೆ ರಾಜ-ಮಹಾರಾಜರೂ ಬರುತ್ತಿದ್ದಿರ ಬೇಕು. ಅಭಿನಯವು ಕೇವಲ ಪುರುಷರಿಂದಲೇ ಆಗುತ್ತಿದ್ದಿರಬೇಕೆಂಬುದು ಒಂದು ಊಹೆಯಾಗುತ್ತದೆ. ಉಳಿದ ವಿವರಗಳಂತೂ ದೊರಕುತ್ತಿಲ್ಲ. ಮಿಶ್ರರೂಪಿನ ಪ್ರೇಕ್ಷಕ ರಾದ ಕಾರಣ ಸಂಸ್ಕೃತದಲ್ಲಿ ಪ್ರದರ್ಶನವಿರುವುದೂ ಸಾಧ್ಯವಾಗುತ್ತದೆ.

ಇಂಥ ರಂಗಭೂಮಿಯಲ್ಲಿ ಬೌದ್ಧ ಧರ್ಮಕ್ಕೆ ಅನುಕೂಲವಾಗಬಲ್ಲ ಪ್ರದರ್ಶನ ಗಳು ನಡೆಯುತ್ತಿದ್ದಿರಬಹುದು. ನಾಗಾರ್ಜುನಕೊಂಡದ ವಿಹಾರಕ್ಕೆ ಸಿಂಹಳ ಮೊದ ಲಾದ ದೂರದೇಶಗಳಿಂದಲೂ ಭಿಕ್ಷುಗಳು ಬಂದು ಹೋಗಿರುವುದಕ್ಕೆ ಆಧಾರಗಳು ದೊರಕುತ್ತವೆ. ಅಂಥವರಿಗಾದರೂ ಧಾರ್ಮಿಕ ಪ್ರದರ್ಶನಗಳು ಜರುಗುತ್ತಿದ್ದಿರ ಬಹುದು. ಇಂದಿಗೂ ಟಿಬೆಟ್ಟಿನ ಮತ್ತು ಭೂತಾನದ ಮಠಗಳಲ್ಲಿ ಅದ್ಭುತಗಳ ಪ್ರದರ್ಶನಗಳು ಜರುಗುವುದನ್ನು ಕಾಣುತ್ತೇವೆ. ಆದುದರಿಂದ ನಾಗಾರ್ಜುನಕೊಂಡ ದಲ್ಲಿ ಬಹಳ ಕಾಲ ಇಂಥ ಚಟುವಟಿಕೆಗಳಿದ್ದಿರಬೇಕೆಂಬುದಕ್ಕೆ ರಂಗಭೂಮಿ ಅಥವಾ ರಂಗಮಂದಿರವಂತೂ ಸಾಕ್ಷಿಯಾಗಿರಬಲ್ಲುದಾಗಿದೆ.

ಭಾರತದ ಬೇರೆಡೆಗಳಲ್ಲೂ ರಂಗಭೂಮಿಯ ಪುರಾತನ ಅವಶೇಷಗಳು ಕಂಡು ಬಂದಿವೆ. ಮಧ್ಯಪ್ರದೇಶದ ಸೀತಾಬೆಂಗರದಲ್ಲಿ ಒಂದು ಗುಹೆಯನ್ನು ಒಳಗೊಂಡ ರಂಗ ಮಂದಿರವೂ ಕಂಡುಬಂದಿದೆ....ರಾಣಿ ಗುಂಫದ ಬಯಲು ರಂಗಭೂಮಿಯನ್ನು ಗುರುತಿಸಿ ದ್ದಾರೆ. ಆದುಡರಿಂದ ನಾಟ್ಯಶಾಸ್ತ್ರವು ಕ್ರಿ. ಪೂ. ಎರಡನೇ ಶತಮಾನದ ವೇಳೆಗೆ ಮುಂಚೆಯೇ ರಚಿತವಾಗಿರುವುದನ್ನು ನೆನೆದಾಗ ಭಾರತದಲ್ಲಿ ನಾಟಕಗಳು ಕ್ರಿ.ಶ. ಪ್ರಾರಂಭದಿಂದೀಚೆಗೆ ಮಾತ್ರ ಹುಟ್ಟಿರಬೇಕೆನ್ನುವಂತೆ ಸಿದ್ಧಾಂತಿಸುವುದು ಸರಿಯಾದು ದಾಗುವುದಿಲ್ಲ.

ಇಂತಹ ಪರಿಶೀಲನೆಯಿಂದ ಭಾರತದಲ್ಲಿ ಕ್ರಿ. ಪೂ.ದ ದಿನಗಳಲ್ಲಿಯೇ ಪ್ರಾಕೃತ ವನ್ನು ಬಳಸುತ್ತಿದ್ದ ರಂಗ ಪ್ರದರ್ಶನಗಳು ಅಥವಾ 'ರೂಪಕ'ಗಳು (ದಶರೂಪಕಗಳು) ಬಳಕೆಯಲ್ಲಿದ್ದಿರಬಹುದಾಗಿದೆ. ಇಲ್ಲದಿದ್ದರೆ 'ನಾಟ್ಯಶಾಸ್ತ್ರ'ದ ಕಲ್ಪನೆ ಕೂಡ ಸಾಧ್ಯ ವಾಗುತ್ತಿರಲಿಲ್ಲ—ಎನ್ನಬಹುದು.

## ಕೆಲವು ಅಭಿಪ್ರಾಯಗಳು :

ಇತಿಹಾಸಜ್ಞರು ನಾಗಾರ್ಜುನ ಕೊಂಡದ ರಂಗಭೂಮಿಯನ್ನು ಕುರಿತು—

ಎಂ. ಎಲ್. ವರದಪಾಂಡೆ : Traditions of Indian Theatre (1972)

1. ಇಕ್ಷ್ವಾಕು ಮಹಾರಾಜ ಮಾಧರಿ ಪುತ್ರ (ಎರಡನೆಯ ದೊರೆ) ಶ್ರೀ ವೀರಪುರಿಸದತ್ತ, ವಿಜಯಪುರಿ ಸಾಮ್ರಾಜ್ಯದ ಸಂಸ್ಥಾಪಕ, ಜಾಂತಮೂಲ 1 ಸಕಾಲದಲ್ಲಿ ಅಂದರೆ 250 ರಿಂದ 275 A D ಇದು ರಚಿತವಾಗಿರಬೇಕು.

2. ನಾಗಾರ್ಜುನ ಕೊಂಡದ ಶಿಲ್ಪಗಳ ಸೌಂದರ್ಯ, ನಾಗರಿಕತೆ ಮತ್ತು ಭಾವುಕತೆಗಳನ್ನು ಗಮನಿಸಿದರೆ ಇಕ್ಷ್ವಾಕು ರಾಜರ ಕಾಲದಲ್ಲಿ ಬದುಕು ಆನಂದಮಯವಾಗಿದ್ದಿರಬೇಕೆನ್ನಿಸುತ್ತದೆ. ಆಗ ನೃತ್ಯ, ಸಂಗೀತ ಮತ್ತು ಅಭಿನಯ ಕಲೆಗಳು ಬಳಕೆಯಲ್ಲಿದ್ದುವು.

3. ಈ ರಂಗಭೂಮಿಯನ್ನು ಇಟ್ಟಿಗೆಯಿಂದ ಕಟ್ಟಲಾಗಿದ್ದು ನದಿಯ ದಂಡೆಯ ಮೇಲಿನ ಬೆಟ್ಟದ ತಪ್ಪಲಿನಲ್ಲಿ (ಇಳಿಜಾರಿನಲ್ಲಿ) ಕಟ್ಟಲಾಗಿತ್ತು. ಸಾಕಷ್ಟು ಉದ್ದದ ಹಾದಿಯೂ ಇತ್ತು. ರಂಗಭೂಮಿಯು ಒಟ್ಟು 55′×46′ ಇದ್ದು ಸುತ್ತಲೂ 3′ 6′ ದ ಗೋಡೆಯೂ ಇತ್ತು. ಇದು ನೂರು ಕಡೆಯಿದ್ದು ನಂತರ ಪ್ರೇಕ್ಷಕರ ಭಾಗವು ಸೋಪಾನದಂತೆ ಬೆಳೆದಿತ್ತು. ಇದು ಭರತನ ನಾಟ್ಯ ಶಾಸ್ತ್ರದಲ್ಲಿನ 2 ನೇ ಅಧಿಕರಣ 96 ನೇ ಪದ್ಯವನ್ನು ನೆನಪಿಗೆ ತರುತ್ತದೆ. 'ಸೋಪಾನ ಕೃತ ಪೀಠಕಾಮಿ' ಎಂದಿದೆ. ಈ ಸೋಪಾನದಲ್ಲಿ 9 ಅಂಗುಲಗಳಿಗೆ ಒಂದರಂತೆ ಮೇಲೇರುವ ಹಂತಗಳಿವೆ. ಪ್ರೇಕ್ಷಕರು ವೀರಾಸನದಲ್ಲಿ ಅಥವಾ ಪದ್ಮಾಸನದಲ್ಲಿ ಕುಳಿತುಕೊಳ್ಳುತ್ತಿದ್ದಿರಬೇಕು.

ರಂಗದ (ಅಖಾಡದ) ಬಲಗಡೆಗೆ ಬೆಂಚುಗಳಿರುತ್ತಿದ್ದುವು. ಬಹುಶ ಇದರಲ್ಲಿ ನಟರು ಕುಳಿತುಕೊಳ್ಳುತ್ತಿದ್ದಿರಬೇಕು. ಅಂಥ ಒಂದು ಬೆಂಚಿನ ಮೇಲೆ 'ಕಾಮುಸಾರ' ಎಂದು ಕೆತ್ತಿದೆ. ಇದು ಒಬ್ಬ ನೃತ್ಯಗಾತಿಯ ಹೆಸರು ಅಥವಾ ಒಂದು ಗುಂಪಿನ ಮುಖಂಡಳಾಗಿದ್ದವಳದು ಇರಬಹುದು. ಆಗಿನ ಕಾಲದಲ್ಲಿ ಕಲಾವಿದರ 'ಸಂಸ್ಥೆ' (Guild)ಗಳಿದ್ದುವು. ಅಂತಹ ಒಂದರ ಸಂಕೇತ 'ಡಮರಂಗ'ವಾಗಿದ್ದು ಅದರ ಗುರುತೂ ಒಂದೆಡೆ ಇದೆ. ಮತ್ತೊಂದರಲ್ಲಿ 'ತ್ರಿರತ್ನ'ದ ಸಂಕೇತವೂ ಇದೆ. ಅಂದರೆ, ಬುದ್ಧ-ಧರ್ಮ-ಸಂಘಗಳ ಸೂಚನೆಯಾಗಿದ್ದು ಈ ರಂಗಭೂಮಿಯು ಬೌದ್ಧ ಧರ್ಮಕ್ಕೆ ಸೇರಿದುದೆಂದು ಊಹಿಸಲು ಎಡೆಕೊಡುತ್ತಿದೆ.

4. ಒಂದು ಪಕ್ಕದಲ್ಲಿ ಮೇಲೇರುವ ಮೆಟ್ಟಲುಗಳನ್ನು ಏರಿಹೋದರೆ ಎರಡು(ಗೌರವಸ್ಥರಿಗಾಗಿ ರಚಿತವಾದ) ಚೌಕಟ್ಟು(boxes)ಗಳಿವೆ. ಇದಕ್ಕೂ ಮೇಲೆ ಪಾಲಿಶ್ ಮಾಡಿದ ಕಡಪದ ಕಲ್ಲುಗಳನ್ನು ಹಾಸಿದ ಸೀಟುಗಳಿವೆ. ಕೆಲವಕ್ಕೆ ಹೆಸರನ್ನೂ ಕೆತ್ತಲಾಗಿದೆ–'ಧನ ಆಸನ' ಎಂದಿದೆ. ರಂಗದಲ್ಲಿ (ಅಖಾಡದಲ್ಲಿ) ನಡುವೆ ಒಂದು ದುಂಡನೆಯ ಗುರುತೂ ಕಂಡುಬಂದಿದೆ. ಇದು ದೀಪದ ಸ್ತಂಭವಿರಬಹುದು. [ಇಂದಿಗೂ ಕೇರಳದಲ್ಲಿ 'ಕೃಷ್ಣಾಟ್ಟಂ' ಮತ್ತು 'ಕಥಕ್ಕಳಿ' ಆಟಗಳಲ್ಲಿ ದೊಡ್ಡ 'ದೀಪಸ್ತಂಭ' (ಕಂಚಿನ ದೀಪ)ವನ್ನು ಇರಿಸುವುದನ್ನು ನೆನಪಿಗೆ ತರುತ್ತದೆ.] ಇದರ ಬೆಳಕಿನಲ್ಲಿ ಅಭಿನಯವಾಗುತ್ತಿದ್ದಿರಬಹುದು.

5. ಬೆಟ್ಟದ ಮೇಲಿನ 'ಹಾರೀತಿ' ದೇವತೆಗೂ ಈ ರಂಗಮಂದಿರಕ್ಕೂ ಸಂಬಂಧವಿದ್ದಿರಬೇಕೆಂದು ತೋರುತ್ತದೆ. ಈ ದೇವತೆಯು ಬೌದ್ಧ ಮಂದಿರಗಳನ್ನು ಕಾವಲು ಕಾಯುವ ದೇವತೆಯಾಗಿದ್ದಾಳೆ. ಈಕೆಯನ್ನು ಗ್ರೀಕ್ ಸಂಬಂಧಿಯೆಂದು ಹೇಳುವ ವಿದ್ವಾಂಸರೂ ಇದ್ದಾರೆ. ಬುದ್ಧನು ಈಕೆಯನ್ನು ಕೋಶಾಂಬಿಯಲ್ಲಿ ಮಾರ್ಪಡಿಸಿದ ಗುರುತಾಗಿ ನರಭಕ್ಷಕಿಯಾಗಿದ್ದವಳು ಸಾಧುವಾಗಿ ಬುದ್ಧನ ಸಂಘಕ್ಕೆ ಸೇರುತ್ತಾಳೆ. ಇನ್ನೂ ಕೆಲವು ಗುರುತುಗಳಿಂದ

ಹಾರೀತಿಯ ಉತ್ಸವವು ಜರುಗುತ್ತಿದ್ದಿರಬೇಕೆಂದು ತಿಳಿಯುತ್ತದೆ. ಆಗ ನೃತ್ಯ, ನಾಟಕ ಮತ್ತು ಸಂಗೀತ ಪ್ರದರ್ಶನಗಳು ಆಗುತ್ತಿದ್ದಿರಬೇಕು. ಇಂಥ ಒಂದು ಹಬ್ಬವು ಗ್ರೀಕರ ಡಯೋನಿಸಸ್ ದೇವತೆಗೂ ಸಲ್ಲುತ್ತಿತ್ತು-ಎಂಬುದನ್ನು ನೆನೆಯಬಹುದಾಗಿದೆ.

6. ಶ್ರೀ ಎಂ. ಎಲ್. ದೇಶಪಾಂಡೆ ಅವರು ಗ್ರೀಕೋ-ರೋಮನ್ ಪ್ರಭಾವವು ನಮ್ಮ ಪೂರ್ವಿಕರ ಮೇಲೆ ಆಗಿದ್ದುದನ್ನು 'ನಿಶ್ಚಯ'ವೆಂದು ಹೇಳುತ್ತಾರೆ. ಅವರಂತೆ ನಾಗಾರ್ಜುನ ಕೊಂಡವು ಅದಕ್ಕೆ ಒಂದು ಒಳ್ಳೆಯ ಉದಾ : ಡಾ. ಆರ್. ಸುಬ್ರಮಣ್ಯಂ, ಅಂತಹ ಹಲವರು ಭಿನ್ನಾಭಿಪ್ರಾಯವನ್ನು ಪಟ್ಟಿದ್ದಾರೆ. ಅದರಂತೆ ನಾಗಾರ್ಜುನಕೊಂಡದ ರಂಗಭೂಮಿಗೂ ಗ್ರೀಕ್ ರಂಗಭೂಮಿಗೂ ಮೂಲಭೂತವಾದ ವ್ಯತ್ಯಾಸಗಳಿವೆ. ಇವು ಹೋಲಿಕೆಗೂ ಮೀರಿವೆ. ಆದರೆ ಸಾಮಾನ್ಯಾರ್ಥದಲ್ಲಿ ಹೋಲಿಕೆಗಳಿವೆ ...ಎನ್ನುತ್ತಾರೆ.

ಐತಿಹಾಸಿಕ ದಾಖಲೆಯಾದ ನಾಗಾರ್ಜುನಕೊಂಡದ ರಂಗಭೂಮಿಯ ಮೂಲ ಸ್ಥಳವಂತೂ ಈಗ ಕೃಷ್ಣಾನದಿಯಲ್ಲಿ ಮುಳುಗಡೆಯಾಗಿದೆ.

7. ಈ ರಂಗಮಂದಿರಕ್ಕೆ ರಂಗಮಂಟಪವೂ ನೇಪಥ್ಯಗೃಹವೂ ಸೇರಿವೆ. ಇದು ಒಂದು ಬಯಲು ರಂಗಮಂದಿರವೆಂಬುದು ಎಂ. ಎಲ್. ವರದಪಾಂಡೆಯವರ ಅಭಿಪ್ರಾಯವಾಗಿದೆ.

8. ಮಧ್ಯಪ್ರದೇಶದ ರಾಮಘಿರ್ ಭಾಗದ ಸೀತಾಬೆಂಗ, ಒರಿಸ್ಸಾದ ಉದಯಗಿರಿಯಲ್ಲಿ ಕಂಡುಬಂದಿರುವ ಬಾರವೇಲನ ಗುಹೆಗಳಿಗೆ ಸೇರಿದ ಬಯಲು ರಂಗಭೂಮಿ ಮತ್ತು ನಾಗಾರ್ಜುನ ಕೊಂಡದ ರಂಗಭೂಮಿ-ಇವು ಮೂರು ಪುರಾತನ ದಾಖಲೆಗಳಾಗಿದ್ದು ಬೆಟ್ಟದ ತಪ್ಪಲುಗಳಲ್ಲಿರುವುದೇ ಒಂದು ವಿಶೇಷವಾಗಿದೆ.

9. ಇವುಗಳಲ್ಲಿ ಎಂಥ ರೂಪಕಗಳು ಪ್ರದರ್ಶಿತವಾಗುತ್ತಿದ್ದುವೆಂಬುದನ್ನು ಇನ್ನೂ ಪರಿಶೀಲಿಸಬೇಕಾಗಿದೆ. ನಾಟ್ಯಶಾಸ್ತ್ರದ ಪ್ರಕಾರ ಮೊದಲ ಎರಡು ರೂಪಕಗಳು 1. ಅಮೃತ ಮಂಥನ (ಸಮವಕಾರ) ಮತ್ತು 2. ತ್ರಿಪುರ ದಾಹ (ಡಿಮ) ಹಿಮಾಲಯದ ತಪ್ಪಲಲ್ಲಿ ಪ್ರದರ್ಶಿತವಾದುವೆಂಬುದನ್ನು ಇಲ್ಲಿ ನೆನೆಯಬಹುದು. (ನಾಟ್ಯಶಾಸ್ತ್ರದ 4.9)

10. ಸೀತಾಬೆಂಗ ಮತ್ತು ಜೋಗಿಮಾರ ಶಾಸನಗಳನ್ನು ಬ್ಲಾಕ್ ಎಂಬ ವಿದ್ವಾಂಸರು-ಸ್ವಭಾವತ ಗಂಭೀರರಾದ ಕವಿಗಳು, ವೈಶಾಖ ಪೂರ್ಣಿಮೆಯ ಜೋಕಾಲಿ ಹಬ್ಬದ ಮೆರೆದಾಟ ಮತ್ತು ಗೀತಗೋಷ್ಠಿಗಳು, ಮತ್ತು ಇದು ಒಂದು ಕವಿತಾವಾಚನದ ಮತ್ತು ಪ್ರಣಯ ಗೀತೆಗಳ ಹಾಡುಗಳಿಂದ ಕೂಡಿರುವುದು-ಎಂದು ಗುರುತಿಸಿದ್ದಾರೆ. ಇದನ್ನು 'ಮದನೋತ್ಸವ' ಯಾ ವಸಂತೋತ್ಸವ-ಎನ್ನಬಹುದಾಗಿದೆ. ಇದಕ್ಕಿಂತ ಹೆಚ್ಚಿನದೇನೂ ಇರಲಾರದು. ಅಂದರೆ ರೂಪಕಗಳ ಪ್ರದರ್ಶನವಾಗಿರಲಾರವು-ಎನ್ನುವವರೂ ಇದ್ದಾರೆ. (ಆದರೆ ನಾಟ್ಯಶಾಸ್ತ್ರದ ಪ್ರಕಾರ ರೂಪಕದಲ್ಲಿ ಸಂಗೀತ-ನೃತ್ಯಗಳ ಪಾಲು ಗಂಭೀರವಾದುದೆಂಬುದನ್ನು ಮರೆಯುವಂತಿಲ್ಲ.

(ಕಿರಣ್‌ಕುಮಾರ್ ತಾಪಲ್ಯಾಲ್ :- ನಾಟ್ಯ ಸಂ. 6, ಸಂ. 1)

11. An art of puppet plays appears to have developed in India at least a couple of centuries before christ.... Dating from the 3rd century B.C., at Sitabanga and Jogimara caves in Ramagarh Hill in South Bihar (Magadha of Ancient Times) There are inscriptions which are highly suggestive of the existence of a developed dramatic art. From the inscription at Jogimara cave, we can naturally assume a very modern

situation for 3rd century B.C. in India–the love of a artist for an actress: Dr. Sunithkumar chatterji. Introduction to Indian Drama. 1956. Indian Monmuents-by N. S. Ramaswamy 1979.

12. Longhurst excavated Nagarjunakonda from 1927 to 1931. His discoveries included "a number of ruined monasteries, apsidal temples, stupas inscriptions, coins, relics, pottery, statues and over four hundred magnificent bas-relifs in the Amaravathi style"

13. In 1954 Dr. R. Subramanyam of the survey made further excavations (of Larghurst and T. N. Ramachandran). He formulated a chronology of the site in three phases, from the third. Second century, BC to the seventh-eighth A.D.

14. Nagarjunakonda, where stupas and other Buddhist sturctures were built mainly under the Ikshvakus in the third and fourth centuries A.D, stood in the banks of the Krishna etc.

Natya Sastra Tr. by Manmohan Ghosl.

**Introduction** : 58/pp X/VIII Variety of Languages or Dialects, The use of Sanskrit along with different dialects of prakirt (XVIII 36-61) must be ascribed to circumstances in the midst of which the ancient Indian drama grew up. The dramas reflect the linguistic condition of the society in which the early writers of plays lived. As the speech is one of the essential features of a person's character and social standing. It may profitably be retained unaltered from the normal. Even in a modern drama, dialects are very often used though with a very limited purpose.

Ibid. 59/X/IX. It was mostly on special occassions like a religious festival, a marriage ceremony, a kings coronation, or a friend's visit that dramatic performances were held. (IV. 269; AD 12–14) But among all those occassions religious festivals were the most common for the performance of a drama. It was natural that on such occassions the drama was a popular entertainment as well, the public being then in a holiday mood.

# 'ವಯಸ್ಸು, ವಿವೇಕ ಮತ್ತು ಜೀವನ ಚಕ್ರ'

(ಸುಪ್ರಸಿದ್ಧ ಮನೋವಿಶ್ಲೇಷಣಾ ತಜ್ಞ ಪ್ರೊ. ಎರಿಕ್ ಎರಿಕ್‌ಸನ್ ರವರೊಡನೆ ಎಲಿಜಬೆತ್ ಹಾಲ್ ನಡೆಸಿದ ಸಂದರ್ಶನದ ಕೆಲವು ಭಾಗಗಳು.)

ಕನ್ನಡಕ್ಕೆ : ಡಾ|| ಬಿ. ಶಶಿಧರ

ಅಮೇರಿಕಾದ ಸಂಯುಕ್ತ ಸಂಸ್ಥಾನಗಳಲ್ಲಿ 'ಬುದ್ಧಿಜೀವಿಗಳ ನೇತಾರ" ಎನಿಸುವಷ್ಟು ಪ್ರಸಿದ್ಧವಾಗಿರುವ ಪ್ರೊ. ಎರಿಕ್ ಎರಿಕ್‌ಸನ್ 1902ರಲ್ಲಿ ಫ್ರಾಂಕ್‌ಫರ್ಟ್–ಆಮ್–ಮೈನ್ (Frankfurt–am–Main) ಎಂಬಲ್ಲಿ ಜನಿಸಿದರು. ಮನೋವಿಶ್ಲೇಷಣಾ ತಜ್ಞರಲ್ಲಿ (Psychoanalysts) ಅದ್ವಿತೀಯ ನೆನಿಸಿಕೊಂಡಿರುವ ಎರಿಕ್‌ಸನ್, ತನ್ನ 'ಮಾನವ ಬೆಳೆವಣಿಗೆಯ ಸಿದ್ಧಾಂತದಿಂದಾಗಿ ವಿಶ್ವ ವಿಖ್ಯಾತ. ಇನ್ನುಳಿದವರಂತೆ ಕೇವಲ ಪ್ರಕ್ಷುಬ್ಧಗೊಂಡವರ ಅಧ್ಯಯನದಲ್ಲೇ ಮುಳುಗಿರದೆ, ತನ್ನ ಸೀಮಾರೇಖೆಯನ್ನು ಹಿಗ್ಗಿಸಿಕೊಂಡ. ತುಂಬಿ ತುಳುಕುತ್ತಿರುವ ಆರೋಗ್ಯದಿಂದಿರುವ ಯುವಕರು, ಅಮೇರಿಕದ ಸಯೋಕ್ಸ್ ಮತ್ತು ಯೂರಕ್ ಬುಡಕಟ್ಟುಗಳು ಇವರ ಅಧ್ಯಯನಕ್ಕೆ ಸಾಮಗ್ರಿಯನ್ನೂ ಸ್ಫೂರ್ತಿಯನ್ನೂ ಒದಗಿಸಿದವು. ಸಮಾಜ ಹಾಗೂ ಚರಿತ್ರೆಗಳು ಮಾನವನ ಬೆಳವಣಿಗೆಯಲ್ಲಿ ವಹಿಸುವ ಪಾತ್ರ ಗಣನೀಯವಾದದ್ದು ಎಂಬುದು ಈತನ ದೃಢನಂಬಿಕೆ. ತನ್ನ ನಂಬಿಕೆಗೊಂದು ಸೈದ್ಧಾಂತಿಕ ನೆಲೆಕೊಡಲು 'ಮನೋಚರಿತ್ರೆ' (Psycho–history) ಎಂಬ ಹೊಸ ಅಧ್ಯಯನ ವಿಷಯವನ್ನೇ ರೂಪಿಸಿದ ಮೇಧಾವಿ. ತನ್ನ ಸುಪ್ರಸಿದ್ಧ ಪುಸ್ತಕವಾದ Young Man Lutner ನಲ್ಲಿ ಆತ, ಹೇಗೆ ಸಹೃದಯತೆಯಿಂದ ಮಾಡಲಾದ ಮನೋವಿಶ್ಲೇಷಣೆಯು ಚಾರಿತ್ರಿಕ ಕಾಲ ಹಾಗೂ ಒಂದು ಮಾನವ ಜೀವ ಇಡೀ ಸಮಾಜದ ಮೇಲೆ ಪ್ರಭಾವ ಬೀರುತ್ತವೆ ಎಂಬುದನ್ನು ಅರಿಯಲು ಸಾಧ್ಯವಾಗಿಸುತ್ತದೆ ಎಂಬುದನ್ನು ನಿರೂಪಿಸಿದ. ಹಿಂದೂ ಸಂಸ್ಕೃತಿ ಹಾಗೂ ಗಾಂಧೀ ಈತನಿಗೆ ಬಹಳಪ್ರಿಯ. ಈತನ Gandhi's Truths ಎಂಬ ಪುಸ್ತಕಕ್ಕೆ ಪುಲಿಟ್ಜರ್ ಬಹುಮಾನ ಹಾಗೂ ರಾಷ್ಟ್ರೀಯ ಪುಸ್ತಕ ಬಹುಮಾನ ದೊರೆತಿವೆ.

ಯುವಜನಾಂಗದ ಬಗ್ಗೆ ಎರಿಕ್‌ಸನ್‌ಗಿರುವ ನೈಜಾನುಕಂಪ ಹಾಗೂ ಕಾಳಜಿಗೆ, ಪ್ರಾಯಶ: ಆತ ಎದುರಿಸಿದ ಪ್ರಕ್ಷುಬ್ಧವೂ, ಗೊಂದಲಮಯವೂ ಆಗಿದ್ದ ಕಿಶೋರಾ

---

ಡಾ. ಶಶಿಧರ ಬೆಂಗಳೂರು ವಿಶ್ವವಿದ್ಯಾಲಯದ ಸ್ನಾತಕೋತ್ತರ ಶಿಕ್ಷಣ ವಿಭಾಗದಲ್ಲಿ ಅಧ್ಯಾಪಕರು. 'ಸಾಕ್ಷಿ;' 'ಸಾಧನೆ' ಗಳಲ್ಲಿ ಲೇಖನಗಳನ್ನು ಪ್ರಕಟಿಸಿದ್ದಾರೆ.

ನಷ್ಟೆಯೇ ಕಾರಣವಾಗಿರಬಹುದು. ಸಾರೂಪ್ಯತೆಯ ಸಂಧಿಗ್ಧತೆ (Identity crisis) ಎಂಬ ಕಲ್ಪನೆಯನ್ನು ಸಾದರ ಪಡಿಸಿದ ವ್ಯಕ್ತಿಯೇ ಕಿಶೋರಾವಸ್ಥೆಯ ಸಂಧಿಗ್ಧತೆ (adolescent crisis) ಯನ್ನು ಎದುರಿಸಬೇಕಾಯಿತು ಎಂಬುದೊಂದು ವಿಪರ್ಯಾಸ. ಅದು, ಆತನೇ ಹೇಳುವ ಹಾಗೆ ಎಷ್ಟೊಂದು ತೀವ್ರವಾಗಿತ್ತೆಂದರೆ, ಆ ಸಂಧಿಗ್ಧತೆ ಆತನನ್ನು ಮನೋರೋಗ (neurosis) ಮತ್ತು ಕಿಶೋರಾವಸ್ಥೆಯ ಮನೋಬೇನೆ (adolescnt psychosis) ಗಳ ಸೀಮಾರೇಖೆಯ ಬಳಿಗೆ ತಂದಿತ್ತು.

ಕಲೆಯನ್ನು ಅಭ್ಯಸಿಸಿ ಕಲಾ ಅಧ್ಯಾಪಕನಾಗ ಹೊರಟಿದ್ದ ಎರಿಕ್‌ಸನ್ ತನ್ನ ಇಪ್ಪತ್ತರ ಹರೆಯದಲ್ಲಿ ಸಿಗ್ಮಂಡ್ ಫ್ರಾಯ್ಡ್ ಮುಂತಾದ ಮನೋವಿಶ್ಲೇಷಣಾತಜ್ಞರನ್ನು ಸಂಧಿಸಿದ. ವಿಯೆನ್ನಾದ ಮನೋ ವಿಶ್ಲೇಷಣಾ ಸಂಸ್ಥೆಯಲ್ಲಿ ಕಲಿಯಲಾರಂಭಿಸಿದ. ಫ್ರಾಯ್ಡನ ಮಗಳಾದ ಅನ್ನಾ ಫ್ರಾಯ್ಡ್ ಈತನ ಗುರು. 1933ರಲ್ಲಿ ಅಮೇರಿಕೆಗೆ ಬಂದ ಎರಿಕ್‌ಸನ್‌ಗೆ ಕ್ಯಾಲಿಫೋರ್ನಿಯಾ ಹಾಗೂ ಹಾರ್ವರ್ಡ್ ವಿಶ್ವವಿದ್ಯಾಲಯಗಳಲ್ಲಿ ಅಧ್ಯಾಪಕ ವೃತ್ತಿ.

ತನ್ನ ಮೊದಲ ಹೆಸರನ್ನು ಕೈಬಿಟ್ಟು, ಎರಿಕ್ ಎಂಬ ಹೊಸ ಹೆಸರನ್ನು ಸೃಷ್ಟಿಸಿ, ಎರಿಕ್‌ನ ಮಗ ಎರಿಕ್‌ಸನ್ ಎಂಬ ಹೊಸ ಹೆಸರನ್ನು ತನಗೆ ತಾನೇ ನಾಮಕರಣ ಮಾಡಿಕೊಂಡ. ಅತಿವಿರಳ ಎಂದು ಕರೆಯಬಹುದಾದ ಮಹಾಪ್ರಭೃತಿ. ಯುವಕರನ್ನೂ ನಾಚಿಸುವಂತಹ ಉತ್ಸಾಹದ ಚಿಲುಮೆಯಾಗಿರುವ ಈ ಮಹಾ ಚೇತನಕ್ಕೆ ಈಗಿನ್ನೂ 81ರ ಹರೆಯ.

ಕ್ಯಾಲಿಫೋರ್ನಿಯಾದಲ್ಲಿ ಪ್ರೊ. ಎರಿಕ್ ಎರಿಕ್‌ಸನ್‌ರ ಸಂದರ್ಶನ ನಡೆಸಿದ ಶ್ರೀಮತಿ ಎಲಿಜಬೆತ್ ಹಾಲ್ 'Psychology today' ನಿಯತಕಾಲಿಕೆಯ ಮಾಜಿ ವ್ಯವಸ್ಥಾಪಕ ಸಂಪಾದಕಿ. ಆಕೆ Child psychology ಎಂಬ ಪುಸ್ತಕದ ಸಹಲೇಖಕಿ ಕೂಡ.

**ಹಾಲ್ :** ಪ್ರೊಫೆಸರ್ ಎರಿಕ್‌ಸನ್‌ರವರೇ, ಕಳೆದ 30 ವರ್ಷಗಳಲ್ಲಿ, ನಿಮ್ಮ ಮಾನವನ ಬೆಳವಣಿಗೆಯ ಸಿದ್ಧಾಂತವು ಜೀವನಚಕ್ರದ ಬಗೆಗಿನ ನಮ್ಮ ದೃಷ್ಟಿಯ ಮೇಲೆ ಹೆಚ್ಚಾಗಿ ತನ್ನ ಪ್ರಭಾವ ಬೀರಿದೆ. ನೀವೀಗ, ಆ ಚಕ್ರದ ಎಂಟನೆಯ ಹಾಗೂ ಅಂತಿಮ ಹಂತವನ್ನು ತಲುಪಿದ್ದೀರಿ. ನಿಮ್ಮ ಸ್ವಂತ ಅನುಭವವೇನಾದರೂ ಮಾನವನ ಬೆಳವಣಿಗೆಯ ಬಗ್ಗೆ ನಿಮ್ಮ ದೃಷ್ಟಿಕೋನವನ್ನು ಬದಲಾಯಿಸಿದೆಯೇ ?

**ಎರಿಕ್ :** ನಿಸ್ಸಂಶಯವಾಗಿ, ನನ್ನ 'The life cycle completed' ಪುಸ್ತಕದಲ್ಲಿ ನನ್ನ ದೃಷ್ಟಿಕೋನಗಳ ಒಂದು ಪುನರಾವಲೋಕನವನ್ನು ಕೊಡುತ್ತಿದ್ದೇನೆ. ನಾನು ಮುಖ್ಯವಾಗಿ, ಅವುಗಳ ಅಂತರ್ಗತ ತಾರ್ಕಿಕತೆಯನ್ನು ಒತ್ತಿಹೇಳುತ್ತೇನೆ. ಸ್ವಾಭಾವಿಕವಾಗಿ 30 ವರ್ಷಗಳ ಹಿಂದೆ, ನಾನು ಮುದುಕನಾದಂತೆ ಊಹಿಸಿಕೊಳ್ಳುವ ಶಕ್ತಿ ನನಗಿರಲಿಲ್ಲ. ಆಗ ವೃದ್ಧಾಪ್ಯದ ಬಗ್ಗೆ ಇದ್ದ ಸಾಮಾನ್ಯ ಕಲ್ಪನೆಯೂ ಬೇರೆಯಾಗಿತ್ತು. ಖಂಡಿತವಾಗಿ, ಸಿದ್ಧಾಂತವಿನ್ನೂ ಸಮಾಜದಲ್ಲಿನ ಇತ್ತೀಚಿನ ಬದಲಾವಣೆ

ಗಳನ್ನೆಲ್ಲಾ ಗಣನೆಗೆ ತೆಗೆದುಕೊಂಡಿಲ್ಲ. ಇಂದು ಜೀವಿಸಿರುವ ಸಾವಿರಾರು ಮಂದಿ ವಯಸ್ಸಾದ ಜನರನ್ನು ಗಮನಿಸಿ. 30 ವರ್ಷಗಳ ಹಿಂದೆ ಆಗಿದ್ದರೆ ಅವರೆಲ್ಲಾ ಇಷ್ಟು ವಯಸ್ಸಿನವರೆಗೆ ಬದುಕಿರುತ್ತಿರಲಿಲ್ಲ. ಆದರೆ, ನಾನು ಮಾನವ ಜೀವಿಗಳ ಅಧ್ಯಯನ ದಲ್ಲಿ, ಚಾರಿತ್ರಿಕ ಸಾಪೇಕ್ಷತೆ (Historical relativity)ಯನ್ನು ಯಾವಾಗಲೂ ಒತ್ತಿಹೇಳಿದ್ದೇನೆ.

**ವಯಸ್ಸಾದ ಜನರ ಸಂಖ್ಯೆಯಲ್ಲಿನ ಹೆಚ್ಚಳ ಹೇಗೆ, ವೃದ್ಧಾಪ್ಯದ ಅನುಭವದ ಮೇಲೆ ಪರಿಣಾಮ ಬೀರುತ್ತದೆ ?**

30 ವರ್ಷಗಳ ಹಿಂದೆ, 'ಹಿರಿಯರ' ಬಗ್ಗೆ ಮಾತನಾಡುತ್ತಿದ್ದೆವು. ಹಿಡಿಯಷ್ಟು ಸಂಖ್ಯೆಯಲ್ಲಿರುತ್ತಿದ್ದ, ಈ ಜ್ಞಾನವೃದ್ಧ ಸ್ತ್ರೀಪುರುಷರು ಸಾವನ್ನು ಧೀಮಂತತೆಯಿಂದ ಎದುರಿಸುತ್ತಿದ್ದರು. ಆದರೆ, ಹಿರಿಯರನ್ನು ಒಂದು ಸಮಾಜ ಅತ್ಯಲ್ಪ ಸಂಖ್ಯೆಯಲ್ಲಿ ಮಾತ್ರ ಹೊಂದಿರಬಲ್ಲುದು. ಆದ್ದರಿಂದ, ನಮ್ಮ ಸುಸಂರಕ್ಷಿಸಲ್ಪಟ್ಟ (Well preserved) ವಯಸ್ಸಾದ ಜನರ ದೊಡ್ಡ ಗುಂಪು, ನಾವೀಗ ವಯಸ್ಸಾದವರ/ ವಯೋವೃದ್ಧರ (elderlies) ಬಗ್ಗೆ ಮಾತನಾಡುವಂತೆ ಮಾಡುತ್ತದೆ. ಈ ಗುಂಪಿನ ಇರುವಿಕೆಯ ಅರ್ಥವೆಂದರೆ, ನಾವು ಇನ್ನೊಮ್ಮೆ ವೃದ್ಧಾಪ್ಯದ ಪಾತ್ರದ ಬಗ್ಗೆ ಯೋಚಿಸಬೇಕಾಗಿದೆ ಎಂದಾಗುತ್ತದೆ. ವಯಸ್ಸಾಗುವುದೇನೋ, ಸ್ವಾಭಾವಿಕವಾಗಿ, ಜೀವನದ ಒಂದು ಭಾಗ. ಆದರೆ, ನಾವು ನಮ್ಮ ಸಂಸ್ಕೃತಿಯಲ್ಲಿ ಯೌವನಕ್ಕೆ (Youth fullness) ಹೆಚ್ಚು ಬೆಲೆ ಕೊಡುವುದರಿಂದಲೋ ಏನೋ, ವಯಸ್ಸಾಗಿರು ವುದು ಉಪಹಾಸ್ಯ ಅಥವಾ ಕೆಟ್ಟದ್ದು ಎನ್ನುವ ಹಾಗೆ ಉತ್ತರ–ಪ್ರೌಢಾವಸ್ಥೆ (later adulthood)ಯ ಬಗ್ಗೆ ಮಾತನಾಡುತ್ತಲೇ ಇರುತ್ತೇವೆ.

**ವಯಸ್ಸಾದವರ (elderlies) ದೊಡ್ಡ ಗುಂಪೇನಾದರೂ, ಮಧ್ಯ-ಪ್ರೌಢಾವಸ್ಥೆ ಮತ್ತು ವೃದ್ಧಾಪ್ಯದ ನಡುವೆ ಜೀವನ ಚಕ್ರಕ್ಕೆ ಇನ್ನೊಂದು ಹಂತವನ್ನು ಅಳವಡಿಸುವಂತೆ ನೀವು ಯೋಚಿಸುವ ಹಾಗೆ ಮಾಡಿದೆಯೋ ?**

ಜೀವನದ ವಿವಿಧ ಹಂತಗಳು ಉದ್ದದಲ್ಲಿ ಒಂದೇ ಸಮವಿಲ್ಲ. ಆದ್ದರಿಂದ ಒಂದು ಹಂತವನ್ನು ಯಾವಾಗಲಾದರೂ ಉದ್ದವಾಗಿಸಬಹುದು. ಜೀವನದ ಕೊನೆಯಲ್ಲಿ ಸಂಕ್ರಮಣದ ಹಂತವೊಂದರ ಬಗ್ಗೆ ಮಾತನಾಡುವುದು, ಸ್ವಲ್ಪ ವಿಲಕ್ಷಣವೆನಿಸಿದರೂ ಸಹ, ಒಂದು ಸಂಕ್ರಮಣದ ಹಂತ (Transitional stage) ವನ್ನು ವಿವರಿಸ ಬಹುದು. ನಾನು ಜೀವನದ ಕೊನೆಯ ಹಂತದಲ್ಲಿ, ಅತಿದೊಡ್ಡ ಬದಲಾವಣೆಯೆಂದರೆ, ಅವರಿಗೆ ಅತಿಯಾಯಿತು ಎಂದು ಯಾವಾಗಲೂ ಭಾವಿಸುತ್ತಲೇ ಬಂದಿರುವ ವಿಷಯ ಗಳಲ್ಲಿ ಮಗ್ನರಾಗಿರಲು ವೃದ್ಧರನ್ನು ಬಿಡಲಾಗುವುದು, ಎಂದುಕೊಳ್ಳುತ್ತೇನೆ. ಮಧ್ಯ- ಪ್ರೌಢಾವಸ್ಥೆ (middle adulthood)ಯ ಹಂತವೇನೋ ಸ್ವಾಭಾವಿಕವಾಗಿ,

ಸೃಷ್ಟಿ-ಶೀಲತೆಯ (Generativity) ಹಂತ. ವೃದ್ಧರು ಹೇಗೆ ಮತ್ತು ಎಷ್ಟು ಕಾಲ ಸೃಷ್ಟಿಶೀಲರಾಗಿರಬಲ್ಲರು (genertive) ಎಂಬುದು ಪ್ರಶ್ನೆಯಾಗುತ್ತದೆ.

ಸೃಷ್ಟಿಶೀಲತೆ (Generativity) ಎಂದರೆ ಮುಂದಿನ ಜನಾಂಗದ ಬಗ್ಗೆ ಕಾಳಜಿ ವಹಿಸುವುದು ಎಂದಾಗುತ್ತದೆ. ವೃದ್ಧರು ಸೃಷ್ಟಿಶೀಲರಾಗಿರಲು ಹೇಗೆ ಸಾಧ್ಯ ?

ನಾನು ಸೃಷ್ಟಿಶೀಲತೆಯನ್ನು (Generativity), ಪ್ರಜನನಶೀಲತೆ (Procreativity), ಉತ್ಪಾದನಾಶೀಲತೆ (Productivity) ಮತ್ತು ಸೃಜನಶೀಲತೆ (Creativity) ಗಳನ್ನು ಒಳಗೊಂಡಿರುವಂತೆ ವಿವರಿಸಿದ್ದೇನೆ. ವಯಸ್ಸಾದ ಜನರಂತೂ ಪ್ರಜನನೀಕರಿಸಲಾರರು, ಅದು ಸ್ವಾಭಾವಿಕ. ಆದರೆ ಉತ್ಪಾದನಾಶೀಲರಾಗಿರಬಹುದು ಮತ್ತು ಸೃಜನಶೀಲರಾಗಿರಬಹುದು. ಪ್ರಾಯಶಃ ವೃದ್ಧರ ಸೃಜನಾತ್ಮಕ ಶಕ್ತಿಯನ್ನು (Creative potential) ಬಹಳಷ್ಟು ಕಡಿಮೆ ಅಂದಾಜು ಮಾಡಲಾಗಿದೆ. ಕೇವಲ ಕೆಲವು ಹಿರಿಯರನ್ನು ಮಾತ್ರ ವಿಶೇಷ ಯೋಗ್ಯತೆಯ ವಿಶಿಷ್ಟ ಉದಾಹರಣೆಗಳನ್ನಾಗಿ ತೋರಿಸಲಾಗಿದೆ.

ಜನರು ಪಾಬ್ಲೋ ಕ್ಯಾಸಲ್ಸ್ (Pablo Casals), ಪಿಕಾಸೋ (Picasso) ಮತ್ತು ಜಾರ್ಜಿಯಾ ಓ' ಕೀಫ್ (Georgia O' Keeffe)ರನ್ನು ಮೆಚ್ಚುತ್ತಾರೆ.

ನಿರ್ದಿಷ್ಟವಾಗಿ. ಆದರೆ, ಅವರು ಇನ್ನೂ ಅನೇಕ ವೃದ್ಧರು ಯಾವುದನ್ನು ಪ್ರತಿನಿಧಿಸಬಲ್ಲರೋ ಅದಕ್ಕೆ ವಿಶೇಷ ಉದಾಹರಣೆಗಳಾಗಿರಬಹುದು. ವೃದ್ಧಾಪ್ಯದ ಈ ಬದಲಾಗುತ್ತಿರುವ ಅನುಭವ, ಒಂದು ಹೊಸ ಹಂತವನ್ನೇನು ಆಹ್ವಾನಿಸುವುದಿಲ್ಲ. ಆದರೆ, ಪ್ರಾಯಶಃ ವಾರ್ಧಕ್ಯದ ಕಡೆಗೆ ಕೊಂಡೊಯ್ಯುವ ಸಂಕ್ರಮಣತೆ (Transition) ದೀರ್ಘವಾಗಿರುತ್ತದೆ. ಅವರು ನಿವೃತ್ತರಾದ ಬಳಿಕವೂ, ವಯಸ್ಸಾದ ಜನರು (ವೃದ್ಧರು), ಒಬ್ಬರಿಗೊಬ್ಬರಿಗೆ ಮತ್ತು ಯುವ ಪೀಳಿಗೆಗಳಿಗೆ (Younger generations) ಉಪಯುಕ್ತರಾಗಿರಬಲ್ಲರು.

ನೀವು ಸ್ವಯಂಸೇವಾಕಾರ್ಯ (Volunteer work)ದ ಬಗ್ಗೆ ಮಾತನಾಡುತ್ತಿದ್ದೀರಾ ?

ಅನೇಕ ಸ್ವಯಂ ಸೇವಾಕಾರ್ಯಗಳೂ, 'ವಯೋವೃದ್ಧ' (elderly) ಪದದ ಗುಣವನ್ನೇ ಪಡೆದುಕೊಳ್ಳುತ್ತವೆ. ಅವರ ದುಡಿಮೆ (work) ನಿಜವಾದ ದುಡಿಮೆ ಎಂದು ಪರಿಗಣಿಸಲ್ಪಡುವುದಿಲ್ಲ; ದುಡಿಮೆಯ ನಿಯಮಗಳನ್ನು (Working conditions) ಹೆಚ್ಚುಕಡಿಮೆ ಹೊಂದಿಸಿದ್ದರೂ ಸಹ; ನಿಜವಾದ ದುಡಿಮೆಯ ಗುಣಮಟ್ಟವನ್ನು ಕಾಪಾಡಿಕೊಂಡು ಬರುವುದು ಅತಿಮುಖ್ಯ.

ಅಂದರೆ ನಾನು ಯಾವುದೋ ಸ್ವಯಂಸೇವಾ ಕೆಲಸ ವೊಂದನ್ನು (Voulnteer job) ಮಾಡುತ್ತಿರುವಾಗ, 'ನನ್ನನ್ನು ಜನರು ಸುಮ್ಮನೆ ಬಿಡುವಿಲ್ಲದಂತೆ ಇಡುತ್ತಿದ್ದಾರೆ; ಇದು ತನಗೆ ತೊಂದರೆಯಾದರೂ ಚಿಂತೆಯಿಲ್ಲವೆಂದು ಮಾಡಿರುವಂತಹದ್ದು' ಎಂದು ನಾನು

ಯೋಚಿಸಿದರೆ, ನನ್ನ ಬಗ್ಗೆ ನಾನು ಸಮಾಧಾನದಿಂದ ಇರುವುದಿಲ್ಲ ಎಂಬುದು ನಿಮ್ಮ ಅಭಿಪ್ರಾಯವೇ ?

ಅದೇ....ಸರಿಯಾಗಿ ವೃದ್ಧರು ಇನ್ನೊಂದು ರೀತಿಯಲ್ಲಿ ಕೂಡ ಸೃಷ್ಟಿಶೀಲರಾಗಿರಬಹುದು. ಅವರು ಒಳ್ಳೆಯ ತಾತ ಅಜ್ಜಿಯರಾಗಿರಬಹುದು ; ಕೇವಲ ಅವರ ಮೊಮ್ಮಕ್ಕಳಿಗೆ ಮಾತ್ರವಲ್ಲ. ವೃದ್ಧರು ಮತ್ತು ಮಕ್ಕಳು ಒಬ್ಬರಿಗೊಬ್ಬರು ಬೇಕು ಮತ್ತು ವೃದ್ಧಾಪ್ಯ ಹಾಗೂ ಬಾಲ್ಯಾವಸ್ಥೆಯ ನಡುವೆ ಆಕರ್ಷಣ (affinity) ಹೊಂದಿದೆ. ವಾಸ್ತವವಾಗಿ ಇದು ಜೀವನ ಚಕ್ರವನ್ನು ದುಂಡಾಗಿಸುತ್ತದೆ. ಈ ಮೇಲಿನ ಅಂಶಗಳು ನನಗೆ ಚೆನ್ನಾಗಿ ಮನದಟ್ಟಾಗಿದೆ. ವಯಸ್ಸಾದವರು ಅನೇಕಸಲ ಮಕ್ಕಳಂತೆ ಕಾಣುತ್ತಾರೆ ಎಂಬುದು ನಿಮಗೆ ಗೊತ್ತೇ ? ನಾವು ಮಕ್ಕಳಾಗಿದ್ದಾಗ ಹೊಂದಿದ್ದ ಕೆಲವು ಗುಣಗಳನ್ನು ಪುನರುಜ್ಜೀವಿಸಿಕೊಳ್ಳಲು ನಮಗೆ ಅವಕಾಶ ನೀಡುವುದು ಅತಿಮುಖ್ಯ.

ಮೊದಲು ಬಾರಿಗೆ ನೀವು ನೋಡುತ್ತಿರುವುದೋ ಎಂಬಂತೆ, ವಸ್ತುಗಳನ್ನು, ಮಗುವಿನ ಅನನುಭವಿ ಕಣ್ಣಿಂದ ಹೊಸದಾಗಿ ನೋಡುವುದು ಎನ್ನುತ್ತೀರೇನು ?

ಹೌದು. ಹಾಗೆಯೇ ಒಂದು ರೀತಿಯಲ್ಲಿ. ಐನ್‌ಸ್ಟೀನ್ ತನ್ನ ಅನುಭವವನ್ನು, ಮಗುವಿನಂತೆ ಬಣ್ಣಿಸಲು "ಆಶ್ಚರ್ಯ" ಎಂಬ ಪದವನ್ನು ಬಳಸಿದ. ಅನೇಕರು ಆತನನ್ನು ಮಗುವಿನಂತೆ ಪರಿಗಣಿಸಿದ್ದರು. ಆತ ಮಗುವಿನಂತೆ ಪ್ರಶ್ನೆಗಳನ್ನು ಕೇಳುತ್ತಿದ್ದುದರಿಂದಲೇ, ಸಾಪೇಕ್ಷತಾವಾದವನ್ನು ರೂಪಿಸಲು ತನಗೆ ಸಾಧ್ಯ ಎಂದು ಆತ ಸಾಧಿಸಿದ ಎಂದುಕೊಳ್ಳುತ್ತೇನೆ. ಆದುದರಿಂದ ವಯಸ್ಸಾದವರು ಮಕ್ಕಳಂತೆ ಯೋಚಿಸುತ್ತಾರೆ ಎಂದು ನಾನೆಂದಾಗ ನನ್ನ ಅರ್ಥದಲ್ಲಿ ಬಾಲಿಶವಾಗಿ ಎಂದಲ್ಲ. ಆದರೆ, ಪ್ರೌಢರು (adults) ಆಗಾಗ್ಗೆ, ಕೆಲಕಾಲ ತ್ಯಾಗ ಮಾಡಬೇಕಾಗುವ–ಆಶ್ಚರ್ಯ, ಹರ್ಷ, ಲೀಲಾಪರತೆ–ಆ ಎಲ್ಲ ವಿಷಯಗಳೊಂದಿಗೆ ಯೋಚಿಸುವುದು ಎಂದುಕೊಳ್ಳುತ್ತೇನೆ.

ಎಂದರೆ ಅವರಿಗೆ ಕೆಲವು ಕರ್ತವ್ಯಗಳಿರುವುದರಿಂದಲೇನು ?

ಅವರು ಗಮನಿಸಬೇಕಾದ ಸಂಗತಿಗಳಿರುವುದರಿಂದ ಎಂದೆನ್ನಿ. ಹಿಂದೂಗಳು ಅದನ್ನು ಜಗತ್ಪರಿಪಾಲನೆ (maintainence of the world) ಎಂದು ಕರೆಯುತ್ತಾರೆ. ನಿಸ್ಸಂದೇಹವಾಗಿ ತಾಂತ್ರಿಕತೆ ವೃದ್ಧರ ಮತ್ತು ಮಕ್ಕಳ ಈ ಸಂಬಂಧದಲ್ಲಿ ತಲೆಹಾಕಿದೆ. ಏಕೆಂದರೆ, ಅದು ಆರ್ಥಿಕ ಕಾರಣಗಳಿಗಾಗಿ, ಜನರನ್ನು ಸಮುದಾಯಗಳಲ್ಲಿ ಕೇಂದ್ರೀಕೃತಗೊಳಿಸುತ್ತದೆ. ವೃದ್ಧರು ಕೇವಲ ಅವರ ಯೋಗಕ್ಷೇಮವನ್ನು ನೋಡಿಕೊಳ್ಳುವ ಸ್ಥಳವೊಂದಕ್ಕೆ ಚಲಿಸಿದಾಗ, ಅದು ಅನಿವಾರ್ಯವಾಗುತ್ತದೆ. ಆದರೆ, ತಾಂತ್ರಿಕತೆಯು ವೃದ್ಧರು ಮತ್ತು ಮಕ್ಕಳು ಬಹುದೂರದಲ್ಲಿದ್ದರೂ ಒಟ್ಟಾಗಿ ಸೇರಲು ಸಾಧ್ಯವಾಗಿಸಿದೆ–ನೀವು ಎಷ್ಟುದೂರ ಬೇಕಾದರೂ ಹಾರಿ ಸಂಚರಿಸಬಹುದು.

ನಿಮ್ಮ ಹೊಸಪುಸ್ತಕದಲ್ಲಿ, ವೃದ್ಧಾಪ್ಯದಲ್ಲಿ 'ಸಾಮಾನ್ಯೀಕರಿಸಿದ ವಿಷಯಾಸಕ್ತತೆ'ಯ (Generalized sensuality) ಹಂತವೊಂದನ್ನು ಸೂಚಿಸುವುದರ ಮೂಲಕ

ಫ್ರಾಯ್ಡ್‌ನಿಂದ ದೂರ ಸರಿದಿದ್ದೀರಿ. ಅತನ ಮನೋಲೈಂಗಿಕ ಹಂತಗಳು (psycho-) sexual stages) ಪರಿಪಕ್ವ ಜನನೇಂದ್ರಿಯಾತ್ಮಕತೆ (mature genitality) ಯೊಡನೆ ಪೂರ್ವ-ಪ್ರೌಢಾವಸ್ಥೆ (early adulthood) ಯಲ್ಲಿ ಅಂತ್ಯಗೊಂಡುವು.

ಫ್ರಾಯ್ಡನ ಪ್ರಕಾರ ಎಳೆಯ ಹಂತದಲ್ಲಿ ಲೈಂಗಿಕತೆಯು (sexuality) ಜನನೇಂದ್ರಿಯ ಕತೆಯಲ್ಲಿ ಕೊನೆಯಾಗುತ್ತದೆ ; ಅಂದರೆ ಅತ್ಯವಶ್ಯಕವಾಗಿ, ಪರಸ್ಪರ ಜನನೇಂದ್ರಿಯಾನಂದ (genital enjoyment) ಎಂದಾಗುತ್ತದೆ. ನಾವು ಮನೋಲೈಂಗಿಕತೆಯ ಇನ್ನೂ ಎರಡು ಹೆಚ್ಚು ಹಂತಗಳನ್ನು ಸೂಚಿಸಿದ್ದೇವೆ: ಪ್ರೌಢಾವಸ್ಥೆಯಲ್ಲಿ ಪ್ರಜನನಿಸುವಿಕೆ (procreativity in adulthood) ಮತ್ತು ವೃದ್ಧಾಪ್ಯದಲ್ಲಿ ಸಾಮಾನ್ಯೀಕೃತ ವಿಷಯಾಸಕ್ತಿ (Generalized sensuality in old age). ಆದರೆ ಜೀವನ ಚಕ್ರದ ನನ್ನ ನಕ್ಷೆಯಲ್ಲಿ ಆವೆರಡಕ್ಕೂ ಆವರಣ ಚಿಹ್ನೆ ಹಾಕಿದ್ದೇನೆ ಎಂಬುದನ್ನು ದಯವಿಟ್ಟು ಗಮನಿಸಿ. ಏಕೆಂದರೆ ಮನೋವಿಶ್ಲೇಷಣಾತ್ಮಕ ಸಿದ್ಧಾಂತದಲ್ಲಿ (Psychoanalytic theory) ಅದಿನ್ನೂ ಪೂರ್ಣವಾಗಿ ಚರ್ಚಿತವಾಗಿಲ್ಲ. ನೋಡಿ, ನಾನು ಒಂದು ಪ್ರಜನನಾತ್ಮಕ ಚೋದಕ (Procreative drive) ವಿದೆ ಎಂದು ನಂಬುತ್ತೇನೆ: ಮಕ್ಕಳನ್ನು ಪಡೆಯುವ ಅಂತಃ ಪ್ರವೃತ್ತಿಯ ಬಯಕೆ (instinctual wish) ಯೊಂದಿದೆ ; ನಾವಿದನ್ನು ಅರಿಯುವುದು ಮುಖ್ಯ.

ಮಕ್ಕಳನ್ನು ಪಡೆಯುವುದು ಬೇಡ ಎಂದು ನಿರ್ಧರಿಸುವವರಿಗೆ ಏನಾಗುತ್ತದೆ ?

ಜನನಸಂಖ್ಯೆಯನ್ನು ಕಡಿಮೆ ಮಾಡಬೇಕು ಎನ್ನುವ ಚರಿತ್ರೆಯ ಒಂದು ಕಾಲದಲ್ಲಿ ನಾವು ಇರುವುದರಿಂದ ಅನೇಕರು ಆ ಬಗೆಯ ನಿರ್ಧಾರ ಕೈಗೊಳ್ಳುತ್ತಾರೆ. ಆದರೆ ಮಕ್ಕಳಿಲ್ಲದೆ ಇರುವ ನಿರ್ಧಾರ ಮಾಡಿದವರಿಗೆ, ಅವರು ತಾವು ಏನನ್ನು ಮಾಡುತ್ತಿಲ್ಲ ಎಂಬುದನ್ನು ತಿಳಿಯುವುದು ಅವಶ್ಯಕ. ಇರುವ ಅಪಾಯವೇನೆಂದರೆ ಅವರು ಆಶಾಭಂಗದ ಸಂವೇದನೆಯನ್ನು (sense of frustration) ಮತ್ತು ಪ್ರಜನನಶೀಲತೆಯ (procrea tivity) ತಿರಸ್ಕರಿಸುವಿಕೆಯಿಂದ (rejection) ಬರುವ ನಷ್ಟವನ್ನು ನಿರೋಧಿಸುತ್ತಾರೆ (repress). ಹಾಗಾದಾಗ ವಿಕ್ಟೋರಿಯನ್ ಯುಗದ 'ಲೈಂ‌ಗಿಕ ನಿರೋಧಿಸುವಿಕೆ'ಯ (sexual repression) ಜಾಗದಲ್ಲಿ, ಒಂದು ಹೊಸ ಸುಪ್ತಚೇತನದ ನಿರೋಧಿಸುವಿಕೆ (unconscious repression) ವೃದ್ಧಿಯಾಗುತ್ತದೆ.

ಯಾರಾದರೂ, 'ನೀವು ಮಕ್ಕಳನ್ನು ಪಡೆದುದಕ್ಕೆ ಕೆಲವು ಸಲ ಪಶ್ಚಾತ್ತಾಪ ಪಡುತ್ತೀರಾ' ಎಂದು ಕೇಳಿದಾಗ, ಒಬ್ಬ ವ್ಯಕ್ತಿ ಸತ್ಯವಾಗಿ ಇಲ್ಲ ಎಂದುತ್ತರಿಸಲು ಸಾಧ್ಯವಾಗುವ ಹಾಗೆ ಅದನ್ನು ಸಂಪೂರ್ಣವಾಗಿ ಮನಸ್ಸಿನಿಂದ ಹೊರಕ್ಕೆ ತಳ್ಳಿಬಿಡುವುದನ್ನು ನೀವು 'ನಿರೋಧಿಸುವಿಕೆ' ಎನ್ನುತ್ತೀರಿ. ಈಗ ಮಕ್ಕಳನ್ನು ಪಡೆಯಬಾರದೆಂದು ನಿರ್ಧರಿಸಿದ ವ್ಯಕ್ತಿ 45ರ ಅಥವಾ 50ರ ವಯಸ್ಸಿನಲ್ಲೊಂದು ದಿನ, ಮುಂಜಾನೆ ಎಚ್ಚೆತ್ತು, 'ನಾನೇನು ಮಾಡಿದೆ ?' ಎಂದಾಗ ಏನಾಗುತ್ತದೆ ?

ಅಂತಹ ವ್ಯಕ್ತಿ ಸಂಗತಿಗಳಿಗೆ (cases) ನೀವು ನಿರ್ದೇಶನಗಳನ್ನು (prescriptions) ಸಿದ್ಧವಾಗಿಟ್ಟುಕೊಂಡಿರುವುದಿಲ್ಲ. 'ನಿನ್ನ ಸಮಸ್ಯೆಯನ್ನು ಬಗೆಹರಿಸುವುದು ಸುಲಭ; ನೀನು ಕೇವಲ ಉದಾತ್ತೀಕರಿಸಬೇಕು (Sublimate)' ಎಂದು ನೀವು ಹೇಳುವುದಿಲ್ಲ. ಆದರೆ 'ಉದಾತ್ತೀಕರಿಸು' ಎಂಬುದು ಸೂಕ್ತವಾದ ಪದ; ಫ್ರಾಯ್ಡ್ ಇದನ್ನು ಅನೇಕ ವರ್ಷಗಳ ಹಿಂದೆಯೇ ವಿಶದಪಡಿಸಿದ್ದಾನೆ. ಪ್ರಜನನಶೀಲತೆಯ ಅಂತಃಪ್ರೇರಣೆ (procreative urge) ಸಾಮಾಜಿಕವಾಗಿ ಫಲದಾಯಕವಾದ ಮಾರ್ಗಗಳಿಗೆ ನಿರ್ದೇಶಿಸಲ್ಪಡಬೇಕು. ಸ್ಪಷ್ಟವಾದ ನಿಯಮಗಳನ್ನು ಹೊಂದಿರುವುದರ ಬದಲು, ಘಟನೆಗಳು ಸಾಮಾನ್ಯವಾಗಿ ಜರುಗುವಂತಹ ರೀತಿಯಲ್ಲಿ, ಅವರ ಇಚ್ಛೆಯಂತೆ ಮಕ್ಕಳನ್ನು ಎಂದಿಗೂ ಪಡೆಯದವರು, ವಿಶ್ವದ ಎಲ್ಲ ಮಕ್ಕಳನ್ನೂ ನೋಡಿಕೊಳ್ಳಲು ಸಹಾಯವಾಗುವಂತೆ, ಸಾಮಾಜಿಕ ರಚನೆ ಯೊಂದನ್ನು ಯೋಜಿಸುವುದು ಮೇಲು. ವಿವಾಹದ ರೀತಿಗಳಲ್ಲಿ ಆದ ಬದಲಾವಣೆಗಳು, ಹೇಗೆ ಅನೇಕರು ತಮ್ಮದಲ್ಲದ ಮಕ್ಕಳನ್ನು ಪೋಷಿಸುವಂತೆ ಮಾಡಿವೆ ಎಂಬುದನ್ನು ನೀವು ಗಮನಿಸಿರಬೇಕು. ಅವರು ಅದನ್ನು ಚೆನ್ನಾಗಿಯೇ ಮಾಡುತ್ತಿದ್ದಾರೆ. ಇದೊಂದು ಹೊಸ ಅಲೆ (Trend). ಕೇವಲ ಕೆಲವು ದಶಕಗಳ ಹಿಂದೆ ಮಗುವೊಂದು ವೈಯುಕ್ತಿಕ ಸಂಪತ್ತೆಂದು ಭಾವಿಸಲಾಗುತಿತ್ತು; ಮತ್ತು, ಆದು ಯಾರಮಗು ಎಂಬುದು ಅತಿ ಮುಖ್ಯವಾಗಿತ್ತು.

ಹಾಗಾದರೆ, ಮುಂದಿನ ಜನಾಂಗವನ್ನು ಪಾಲಿಸಬೇಕೆನ್ನುವ ಅಂತಃಪ್ರೇರಣೆಯನ್ನು, ಒಂದು ಸೃಷ್ಟಿಶೀಲ ಸಾಮಾಜಿಕ ವ್ಯವಸ್ಥೆ (Generative social system) ಯನ್ನು ನಿರ್ವಹಿಸುವುದರಲ್ಲಿ ಸಹಾಯ ಮಾಡುವುದರಿಂದ ತೃಪ್ತಿಗೊಳಿಸಬಹುದು?

ಹೌದು. ಮತ್ತೆ ಅದು ನಾನು ಏಕೆ ಆ ಹಿಂದೂ ಪದ 'ಜಗತ್ಪರಿಪಾಲನೆ' ಎಂಬುದನ್ನು ಅಷ್ಟೊಂದು ಮೆಚ್ಚುತ್ತೇನೆ ಎಂಬುದಕ್ಕೆ ಕೂಡ ಕಾರಣ.

ನೀವು ಸೃಷ್ಟಿಶೀಲತೆ (Generativity) ಬಗ್ಗೆ ಚರ್ಚಿಸುವಾಗ ಅದನ್ನು, ಸ್ವಲೀನತೆ (Self-absorption) ಅಥವಾ ಜಡತೆ (Stagnation) ಯೊಡನೆ ವ್ಯತ್ಯಾಸ ತೋರಿಸಿ, ಅವುಗಳು ಪ್ರೌಢಾವಸ್ಥೆಯಲ್ಲಿನ ವಿರೋಧೀ ಬಲವುಗಳು (opposing trends) ಎನ್ನುತ್ತೀರಿ. ಸೃಷ್ಟಿಶೀಲತೆ ವಿಜೃಂಭಿಸಿದರೆ, ಒಬ್ಬ ವ್ಯಕ್ತಿ ಪಾಲನೆಯ (care) ಮೂಲ ಸಾಮರ್ಥ್ಯವನ್ನು (basic strength) ಬೆಳೆಸಿಕೊಳ್ಳುತ್ತಾನೆ. ಸೃಷ್ಟಿಶೀಲತೆ ಒಂದು ನಿಯತವಾದ 'ನಿಶ್ಚೇತನ'ದ (dystonic) ಪಡಿರೂಪ (counter part) ವೊಂದನ್ನು ಕೂಡ ಹೊಂದಿದೆ; ಅದನ್ನು ತಿರಸ್ಕರಿಸುವಿಕೆ (rejectivity) ಎನ್ನಬಹುದು-

ಅವೆರಡೂ ಪರಸ್ಪರ ಸಂಬಂಧಿಸುತ್ತವೆ ಎಂದು ಒತ್ತಿ ಹೇಳಲು ಬಯಸುತ್ತೇನೆ. ಸೃಷ್ಟಿಶೀಲತೆಯು ಜಡತೆಯನ್ನು ಶಾಶ್ವತವಾಗಿ ನಿವಾರಿಸುವ ಒಂದು ಸಾಧನೆ (achievement) ಯೆಂದು ಭಾವಿಸಬಾರದು. ಬಹುಮಟ್ಟಿಗೆ, ವ್ಯಕ್ತಿಯೊಬ್ಬ ಅವೆರಡನ್ನೂ ಹೊಂದಿರುತ್ತಾನೆ. ನೀವು ಅತಿ ಸೃಜನಶೀಲ ವ್ಯಕ್ತಿಗಳು ಜೀವನವನ್ನು ಅಧ್ಯಯನ

ಮಾಡಿದುದೇ ಆದರೆ, ಒಮ್ಮೊಮ್ಮೆ ಅವರು ಜಡತೆಯ ಭಯಂಕರ ಸಂವೇದನೆಯನ್ನು ಹೊಂದಿರುವುದನ್ನು ನೀವು ಕಾಣುತ್ತೀರಿ. ಮತ್ತು, ಆ ಬಗೆಯ ವಿರೋಧಗಳ ಪರಸ್ಪರಾನುಕ್ರಿಯೆ (interaction), ಜೀವನಚಕ್ರದ ಪ್ರತಿಯೊಂದು ಹಂತದ ವೈಶಿಷ್ಟ್ಯ.

**ಹಂತವೊಂದರ ಸಂದಿಗ್ಧತೆಯು ಸಫಲವಾಗಿ ಬಗೆಹರಿಸಲ್ಪಟ್ಟರೆ ಪರಾಭವಗೊಂಡ ಗುಣ ಮಾಯವಾಗುವುದಿಲ್ಲ; ಅದರ ಬದಲು ಧನಾತ್ಮಕ ಗುಣ (positive quality) ಗುಣದ ಪ್ರಾಬಲ್ಯ ಹೊಂದಿರುವಂತೆ ಸಮತೋಲನವು (balance) ಬದಲಾಗುತ್ತದೆಯಲ್ಲವೇ ?**

ನಿಶ್ಚಿತವಾಗಿ. ಅದೊಂದು ಸಮತೋಲನತೆಯ ವಿಷಯ, ಆದರೆ ನಾವು "ಧನಾತ್ಮಕ" ಮತ್ತು "ಋಣಾತ್ಮಕ" ಪದಗಳನ್ನು ಬಳಸುವುದಿಲ್ಲ. ಕೆಲವು ಬಾರಿ ನಾವು ನಿಶ್ಚೇತನ ಪ್ರವೃತ್ತಿ (dystonic tendency) ಎಂದು ಏನನ್ನು ಕರೆಯುತ್ತೇವೆಯೋ, ಅದು ಧನಾತ್ಮಕ ರೂಪಗಳನ್ನು ಹೊಂದಿರಬಹುದು. ಉದಾಹರಣೆಗೆ, ವೃದ್ಧಾಪ್ಯದಲ್ಲಿ ಜೀವನ ಸಂಧಿಗ್ಧತೆಯು (life crisis) ಸಮಗ್ರತೆ (integrity) ಹಾಗೂ ನಿರಾಶೆಗಳ (despair) ನಡುವಿನ ದ್ವಂದ್ವವನ್ನು ಒಳಗೊಂಡಿರುತ್ತದೆ. ಯಾರಾದರೂ ಹೇಗೆ ಸಮಗ್ರತೆಯನ್ನು ಹೊಂದಿದ್ದೂ, ತನ್ನದೇ ಜೀವನದಲ್ಲಿ ಕೆಲವು ವಿಷಯಗಳ ಬಗ್ಗೆ, ಮಾನವನ ಸ್ಥಿತಿಯ ಬಗ್ಗೆ ನಿರಾಶೆಗೊಳ್ಳದಿರಲು ಸಾಧ್ಯ ? ನಿಮ್ಮ ಜೀವನವು ಸಂಪೂರ್ಣವಾಗಿ ಸುಂದರವೂ, ಆಶ್ಚರ್ಯಕರವೂ ಆಗಿದ್ದರೂ ಸಹ, ಅನೇಕ ಜನರು ಶೋಷಿತರಾಗಿದ್ದಾರೆ ಅಥವಾ ಕಡೆಗಣಿಸಲ್ಪಟ್ಟಿದ್ದಾರೆ ಎಂಬ ವಾಸ್ತವಾಂಶ ಸ್ವಲ್ಪ ನಿರಾಶರನ್ನಾಗುವಂತೆ ಮಾಡಬೇಕು.

**ಹಾಗಾದರೆ ಜನರು, ತಮ್ಮ ಜೀವನ ಎರಿಕ್‌ಸನ್‌ನ ಸಿದ್ಧಾಂತದಂತೆ ಜೀವಿಸಲ್ಪಟ್ಟರೆ, ತಾವು ಚೆಂಗುಲಾಬಿಯ ಎಂಟು ಹಂತಗಳನ್ನು ಉಪಾಗಮಿಸುತ್ತೇವೆ ಎಂದು ನಿರೀಕ್ಷಿಸಬಾರದು. ಒಬ್ಬವ್ಯಕ್ತಿಯು, ನೀವು ಪ್ರತಿ ಜೀವನಹಂತದ ಭಾವಾವಿಷ್ಟ ಗುಣ (Syntonic quality) ಎಂದು ಕರೆಯುವುದನ್ನು, ಅದರ ಸಹಚರಿಯಾದ ನಿಶ್ಚೇತನ ಗುಣ (dystonic quality) ವಿಲ್ಲದೆಯೇ ಬೆಳೆಸಿಕೊಳ್ಳಲು ಸಾಧ್ಯವೇ ? ನೀವು ಜಡತೆಯಿಂದ ಸೃಷ್ಟಿಶೀಲತೆಯನ್ನು ಬೆಳೆಸಬಲ್ಲಿರಾ ? ಅಥವಾ ಅಪನಂಬಿಕೆ (distrust) ಯಿರದ ನಂಬಿಕೆಯನ್ನು (trust) ಬೆಳೆಸುವುದು ಸಾಧ್ಯವೇ ?**

ನಾವು ಕೊನೆಯದನ್ನು ತೆಗೆದುಕೊಳ್ಳೋಣ, ಅದು ಶೈಶವಾವಸ್ಥೆ (infancy) ಯಲ್ಲಿನ ಮನೋಸಾಮಾಜಿಕ (psychosocial) ಸಂದಿಗ್ಧತೆಯನ್ನು ವಿವರಿಸುತ್ತದೆ. ನಂಬಿಕೆಯ ಒಂದು ಮೂಲ ಪ್ರಜ್ಞೆಯೆಂದರೆ, ಮಗುವು ಅದಕ್ಕೆ ಬೇಕಾದಾಗ ಅದರ ಪೋಷಕರು ಅದರ ಬಳಿಯಿರುವಂತೆ ಅವರ ಮೇಲೆ ಅವಲಂಬಿತನಾಗುವುದನ್ನು ಕಲಿತಿದೆ ಮತ್ತು ನಂಬಿಕೆಗೆ ಅರ್ಹ ಎಂದು ತನ್ನನ್ನು ಪರಿಗಣಿಸುವುದನ್ನು ಕಲಿತಿದೆ ಎಂದಾಗುತ್ತದೆ. ಆದರೆ ಸ್ವಲ್ಪವೂ ಅಪನಂಬಿಕೆಯನ್ನೇ ಹೊಂದಿರದ ವ್ಯಕ್ತಿ ಹೇಗಿರುತ್ತಾನೆ ಎಂಬುದನ್ನು ನೀವು ಕೇವಲ ಊಹಿಸಬೇಕು ಅಷ್ಟೆ.

ಸ್ವಲ್ಪದರಲ್ಲಿ ಹೇಳಬೇಕೆಂದರೆ, ಆತ ಸುಲಭವಾಗಿ ಮೋಸಗೊಳ್ಳುತ್ತಾನೆ ಪ್ರಾಯಶಃ, ನಾವು ಆ ತರಹದ ವ್ಯಕ್ತಿ ಅಷ್ಟೇನೂ ತೀಕ್ಷ್ಣ ಬುದ್ಧಿಯುವನಾಗಿರಲಿಲ್ಲ ಎಂದು ಕೊಳ್ಳುತ್ತೇವೆ.

ನಂಬಿಕೆ ಮತ್ತು ಅಪನಂಬಿಕೆಗಳ ನಡುವಿನ ದ್ವಂದ್ವದಿಂದಾಗಿ ಶಿಶುವು ಭರವಸೆಯನ್ನು ಬೆಳೆಸಿಕೊಳ್ಳುತ್ತದೆ. ಇದು ಪ್ರೌಢರಲ್ಲಿ ಕ್ರಮೇಣ ಶ್ರದ್ಧೆ (faith) ಯಾಗುವುದರ ಆದಿರೂಪ. ನೀವು ಪ್ರೌಢ ವ್ಯಕ್ತಿಯೊಬ್ಬ ಭರವಸೆ ಹೊಂದಿದ್ದಾನೆ ಎಂದರೆ, ನಾನು "ಹೌದೇ, ಇರಬಹುದು" ಎನ್ನುತ್ತೇನೆ. ಆದರೆ ನೀವು ಕೂಸೊಂದು ಶ್ರದ್ಧೆ ಹೊಂದಿದೆ ಎಂದರೆ, ನಾನು 'ಅದಿನ್ನೂ ಒಂದು ಕೂಸು' ಎನ್ನುತ್ತೇನೆ. ನಿಜವಾದ ಶ್ರದ್ಧೆಯು ಒಂದು ಪರಿಪಕ್ವವಾದ ಮನೋವೃತ್ತಿ.

ಹಾಗಾದರೆ ವಿವಿಧ ಸಾಮರ್ಥ್ಯಗಳು ವೃದ್ಧಾಪ್ಯದಲ್ಲಿ ವಿವಿಧ ರೂಪಗಳನ್ನು ತಳೆಯುತ್ತವೆ, ಏಕೆಂದರೆ ಅವೆಲ್ಲಾ ವೃದ್ಧಾಪ್ಯದ ಸಾಮರ್ಥ್ಯವಾದ 'ವಿವೇಕ'ದಿಂದ ಹದಮಾಡಲ್ಪಟ್ಟಿರುತ್ತವೆ.

ಹೌದು, ವೃದ್ಧಾಪ್ಯವೆಂದರೆ ಯಾವಾಗ ಒಂದಷ್ಟು ವಿವೇಕ ಸಾಧ್ಯವಾಗುತ್ತದೆಯೋ ಆಗ. ಮತ್ತು ನೀವು ಅದನ್ನು ತುಂಬಾ ತೇಪೆ ಹಾಕಿದ ಇಂದ್ರಜಾಲದ ಹಾಗೆ ಮಾಡದೆ ಇರುವವರೆಗೆ, ಆವಶ್ಯಕ ಸಹ.

ಪ್ರಾಯಶಃ ಅಸ್ಸಿಸಿಯ ಸಂತ ಫ್ರಾನ್ಸಿಸ್‌ನ ಪ್ರಾರ್ಥನೆ ನೀವು ಹೇಳುತ್ತಿರುವುದನ್ನು ವಿವರಿಸುತ್ತದೆಯೆಂದು ತೋರುತ್ತದೆ : ಬದಲಿಸಲು ನಿಮಗೆ ಯಾವುದು ಸಾಧ್ಯವೋ, ಅದನ್ನು ಬದಲಿಸುವುದು ಮತ್ತು ಯಾವುದನ್ನು ಬದಲಿಸುವ ಭರವಸೆ ಹೊಂದಲು ಸಾಧ್ಯವಿಲ್ಲವೋ ಅದನ್ನು ಬದಲಿಸದಿರುವುದು ; ಆದರೆ ವ್ಯತ್ಯಾಸವನ್ನು ತಿಳಿಯುವಷ್ಟು ವಿವೇಕಿಯಾಗಿರುವುದು ಅವಶ್ಯವಲ್ಲವೇ ?

ನಿಸ್ಸಂದೇಹವಾಗಿ, ಇದನ್ನೆಲ್ಲಾ ಅಷ್ಟೊಂದು ಸರಳಗೊಳಿಸಲು ಅನುಮಾನಿಸಿದರೂ ಕೂಡ ಮೇಲಿನ ವಿವರಣೆಯನ್ನು ಒಪ್ಪುತ್ತೇನೆ.

ನೀವು ಜೀವನವನ್ನು ಒಂದು ಚಿತ್ರಯವನಿಕೆಯಂತೆ (tapestry) ಪರಿಗಣಿಸುವುದಾದರೆ-ಶ್ರೀಮತಿ ಎರಿಕ್‌ಸನ್‌ರವರು ಮಾಡಿರುವಂತೆ, ಪ್ರತಿಯೊಂದು ಸಾಮರ್ಥ್ಯವೂ ವಿವಿಧ ಬಣ್ಣಗಳಿಂದ ನೇಯಲ್ಪಟ್ಟಾಗ, ಅಂತಿಮ ವಿನ್ಯಾಸ ಪ್ರತಿಯೊಬ್ಬ ವ್ಯಕ್ತಿಗೂ ಬೇರೆ ಬೇರೆಯಾಗಿರುತ್ತದೆ. ಆದರೆ ವೃದ್ಧಾಪ್ಯದ ದ್ವಂದ್ವವಾದ ಸಮಗ್ರತೆ (intigrity) ಮತ್ತು ನಿರಾಶೆ (despair)ಗಳ ನಡುವಿನ ಹೋರಾಟವನ್ನು ಹಿಂದಿನ ಹ ತಗಳನ್ನು ಅನುಕೂಲಕರವಾಗಿ ಬಗೆಹರಿಸದೆ ಸಫಲವಾಗಿ ನಿರ್ವಹಿಸಬಹುದೇ ?

ವಾಸ್ತವವಾಗಿ, ನೀವು ಹಿಂದಿನ ಎಲ್ಲಾ ಏಳು ಹಂತಗಳನ್ನೂ ಸರಿಸಮಾನವಾಗಿ, ಚೆನ್ನಾಗಿ ಬಗೆಹರಿಸಿರುವ ಸ್ಥಿತಿಯನ್ನು ಊಹಿಸಿಕೊಳ್ಳಲೂ ಸಾಧ್ಯವಿಲ್ಲ. ಅಂತಹ ವ್ಯಕ್ತಿಯೊಬ್ಬನನ್ನು ನಾನು ಸಂಧಿಸುತ್ತೇನೆ ಎಂದು ಎಂದೆಂದಿಗೂ ಆಶಿಸುವುದಿಲ್ಲ. ಜೀವನದ ಕೊನೆಗೆ ನೀವು ಅಸ್ತಿತ್ವ ಸಂಬಂಧೀ ಸಾರೂಪ್ಯತೆ (Existential identity)

ಯೊಂದನ್ನು ಕೇಂದ್ರೀಕರಿಸಲು ಪ್ರಯತ್ನಿಸುತ್ತೀರಿ. ಅದು ಕೂಡ ಮಾತಿನಲ್ಲಿ ಸಾಧ್ಯ. ಆದರೆ ಅಸ್ತಿತ್ವ ಸಂಬಂಧೀ ಸಾರೂಪ್ಯತೆಯು ಮನೋ ಸಾಮಾಜಿಕ (psycho-social) ಸಾರೂಪ್ಯತೆಯಿಂದ ಉದ್ಭವಿಸಬೇಕು.

ಹಾಗಾದರೆ, ಅದಕ್ಕೆ ಬೇಕಾದದ್ದು; ನಾಲ್ಕು ಅಂಶಗಳು: 1. ಸರಿಯಾದ ದ್ವಂದ್ವ, 2. ಆ ದ್ವಂದ್ವ ಸರಿಯಾದ ವ್ಯಕ್ತಿಯಲ್ಲಿರುವುದು, 3. ಈ ಬಗೆಯ ದ್ವಂದ್ವಕ್ಕೆ ಯಾರು ಸಿದ್ಧರಿರುತ್ತಾರೋ ಆ ಜನರ ನಡುವೆ ಆ ವ್ಯಕ್ತಿ ಇರಬೇಕು, 4. ಸೂಕ್ತ ಸಮಯದಲ್ಲಿ ಇವೆಲ್ಲ ಒಟ್ಟಿಗೆ ಸಂಭವಿಸಬೇಕು.

ಹೌದು ಏನಾಗಿದೆ ಎಂದರೆ ಪ್ರತಿ ಚಾರಿತ್ರಿಕ ಸನ್ನಿವೇಶದಲ್ಲೂ ಮನುಷ್ಯ ಮತ್ತು ಅವನ ಕಾಲ ಪರಸ್ಪರ ಪೂರಕಗಳಾಗಿ ವರ್ತಿಸಿವೆ.

ಗಾಂಧೀ ಚಿತ್ರ ಬಿಡುಗಡೆಯಾದಾಗಿನಿಂದ ವ್ಯಕ್ತಿ (ಗಾಂಧೀ) ಹಾಗೂ ನಿಮ್ಮ ಪುಸ್ತಕದ ಬಗ್ಗೆ ಮತ್ತೆ ಹೊಸದಾದ ಆಸಕ್ತಿ ಕಂಡು ಬಂದಿದೆ. ಸೃಷ್ಟಿಶೀಲತೆ (Generativity)ಯ ಬಗ್ಗೆ ಮಾತನಾಡುವುದಾದರೆ, ಗಾಂಧಿಗೆ ತನ್ನ ಕುಟುಂಬದ ಜನರ ಬಗ್ಗೆಗಿಂತ, ಇತರರ ಬಗ್ಗೆ ಕಾಳಜಿ ಹೆಚ್ಚಾಗಿತ್ತು ಎಂದು ನನಗನಿಸಿತು.

ಆತ 'ರಾಷ್ಟ್ರಪಿತ' (father of the nation) ನಾಗಿ ಬದಲಾದ. ಮತ್ತು ಆತ ತನ್ನ ಪಿತೃಸಂಬಂಧೀ ಭಾವನೆಗಳನ್ನು (paternal feelings) ಇಡೀ ಮಾನವ ಜನಾಂಗಕ್ಕೆ ವಿಸ್ತರಿಸಿದ. ನಿಸ್ಸಂದೇಹವಾಗಿ ಹೇಳುವುದಾದರೆ ಆತ ಮಾತೃ ಸಂಬಂಧೀ (maternal) ಮತ್ತು ಪಿತೃಸಂಬಂಧೀ (paternal) ಗುಣಾಂಶಗಳ (traits) ಒಂದು ವಿಚಿತ್ರವೂ (strange) ಮತ್ತು ಅನುಪಮವೂ ಆದ (unique) ಮಿಶ್ರಣವನ್ನು ಹೊಂದಿದ್ದ.

ಸ್ತ್ರೀಯರ ಬಗ್ಗೆ ಹೇಳುವುದಾದರೆ, ಸಾರೂಪ್ಯತೆಯೊಂದನ್ನು ನಿರೂಪಿಸುವ ನಿಯತಕಾರ್ಯ (Task) ಕಿಶೋರರಿಗೂ (adolescent boys) ಮತ್ತು ಕಿಶೋರಿಯರಿಗೂ (adolescent girls) ಹೇಗೆ ಬೇರೆಯಾಗುತ್ತದೆ ?

ಸ್ವತಃ ನಿಯತಕಾರ್ಯವೇ ಬೇರೆಯಾಗುವುದಿಲ್ಲ; ಮುಖ್ಯ ಹಂತಗಳು, ಸಾಮರ್ಥ್ಯಗಳು ಮತ್ತು ಕಂಟಕ (risks) ಗಳು ಪುರುಷರಿಗೆ ಮತ್ತು ಸ್ತ್ರೀಯರಿಗೆ ಬೇರೆಯಾಗುವುದಿಲ್ಲ. ಬದಲಾಗಿ (ವಾಸ್ತವವಾಗಿ) ಅವು ಲಿಂಗಭೇದಗಳು (sexdifferences) ಪರಸ್ಪರ ಪೂರಕವಾಗಿರಲು ಸಹಾಯ ಮಾಡುತ್ತವೆ. ಅತಿ ಪ್ರಬಲವಾದ ಲೈಂಗಿಕ ಪ್ರಭೇದದ ಆಚ್ಛೊತ್ತುವಿಕೆ ನಡೆಯುತ್ತಿರದೇ ಇದ್ದಲ್ಲಿ, ಸ್ತ್ರೀಪುರುಷರಿಬ್ಬರೂ ಒಂದಷ್ಟು ಸ್ವಾತಂತ್ರ್ಯ ಹೊಂದಿರುತ್ತಾರೆ. ಒಬ್ಬ ಪುಟ್ಟ ಹುಡುಗ ಒಬ್ಬ ಪುಟ್ಟ ಹುಡುಗಿಯ ಹಾಗೆ, ಅಥವಾ ಒಬ್ಬ ಹುಡುಗಿ ಹುಡುಗನ ಹಾಗೆ, ವರ್ತಿಸಬಹುದು. ಮತ್ತೆ ಅದು ಮನೋರಂಜಕವೆಂದು ಪರಿಗಣಿಸಲ್ಪಡುತ್ತದೆ. ಅದೆಲ್ಲಾ, ಸಂಸ್ಕೃತಿಯು

ಅದರಿಂದೇನು ಮಾಡುತ್ತದೆ ಎಂಬುದರ ಮೇಲೆ ಅವಲಂಬಿತವಾಗಿದೆ. ಆದರೆ ಮುಖ್ಯ ವಾಗಿ, ಒಂದು ನಿರ್ದಿಷ್ಟ ಹಂತದಲ್ಲಿ ವಿಕಾಸಗೊಳ್ಳಬೇಕಾದ ಯಾವುದೇ ಸಾಮರ್ಥ್ಯ ಹುಡುಗ ಹುಡುಗಿಯರಿಬ್ಬರಲ್ಲೂ ಕಾಣಿಸಿಕೊಳ್ಳಲೇ ಬೇಕು. ಉದಾಹರಣೆಗೆ, ಸಂಕಲ್ಪ ಶಕ್ತಿ (will power), ಕಾರ್ಯಶೀಲತೆ (industry) ಅಥವಾ ಸಾರೂಪ್ಯತೆ (identity).

ನಿಮ್ಮ Young Man Luther ಮತ್ತು Gandhi's Truth ಪುಸ್ತಕಗಳಲ್ಲಿ, ನೀವು ಅಸಾಧಾರಣ ವ್ಯಕ್ತಿಯೊಬ್ಬ ತನ್ನ ವೈಯುಕ್ತಿಕ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಮಾಡಿದ ಪ್ರಯತ್ನಗಳು ಹೇಗೆ ಇಡೀ ಗುಂಪಿಗೇ ಲಾಭದಾಯಕವಾದುವು ಎಂದು ತೋರಿಸಿದ್ದೀರಿ. ಲೂಥರ್ ಮತ್ತು ಗಾಂಧಿ, ಜೀವನದ ಹಿಂದಿನ ಹಂತಗಳನ್ನು ಸಾಧ್ಯವಿದ್ದಷ್ಟೂ ಚೆನ್ನಾದ ರೀತಿ ಯಲ್ಲಿ ಬಗೆಹರಿಸಿದ್ದರೆ, ಅವರು ಅಷ್ಟೊಂದು ಮಹತ್ತರವಾದ ಬದಲಾವಣೆಯನ್ನು ಮಾಡುವ ಅಂತಃಪ್ರೇರಣೆಯನ್ನೇ ಹೊಂದದಿರುವಷ್ಟು ತೃಪ್ತರಾಗಿರುತ್ತಿದ್ದರೇ ?

ನಾನು ಹೇಳಲು ಸಾಧ್ಯವಿಲ್ಲ. ನಾನು ಪ್ರತಿಪುಸ್ತಕದಲ್ಲೂ ತೋರಿಸಲು ಪ್ರಯತ್ನಿ ಸಿದ್ದೇನೆಂದರೆ, ಅಸಾಧಾರಣ ವ್ಯಕ್ತಿಯೊಬ್ಬ ಸರಿಯಾದ ದ್ವಂದ್ವಗಳನ್ನು ಹೊಂದಿದ್ದ ಎಂಬುದನ್ನು ಮಾತ್ರವಲ್ಲ ; ಆದರೆ ಆತ ಬದುಕಿದ್ದ ಒಂದು ಅವಧಿಗೆ ಅವನೇ ಬೇಕಾಗಿತ್ತು ಎಂಬುದನ್ನು. ಆಗ ಚಾರಿತ್ರಿಕ ಅವಧಿಗೆ (historical period) ವೈಯುಕ್ತಿಕವಾಗಿ ಬಗೆಹರಿಸಲಾಗದಿದ್ದುದನ್ನು ಸಾಮೂಹಿಕವಾಗಿ ಬಗೆಹರಿಸುವುದು ಬೇಕಾಗಿತ್ತು. ನಾನು ಒಂದು ಪುಸ್ತಕದಲ್ಲಿ ಹೇಳಿರುವ ಹಾಗೆ, ಆತ ತನ್ನ ವೈಯುಕ್ತಿಕ ಜೀವನದಲ್ಲಿ ತನಗೆ ಏನನ್ನು ಬಗೆಹರಿಸಲು ಸಾಧ್ಯವಾಗಲಿಲ್ಲವೋ ಅದನ್ನು, ಚರಿತ್ರೆಯಲ್ಲಿನ ತನ್ನ ಅವಧಿಗಾಗಿ ಮತ್ತು ತನ್ನ ಜನರಿಗಾಗಿ ಬಗೆಹರಿಸಿದ. ಇದೇ ಅವನನ್ನು ನಾಯಕನನ್ನು ಮಾಡು ವಂತಹದ್ದು.

---

ಭಾಷೆಯಿರುವುದು ಮಾನವನಿಗಾಗಿ ; ಅದು ಅಂತಿಮ ಗುರಿಯಲ್ಲ. ಅಂತಿಮ ಗುರಿ ಮಾನವನ, ಸಮಾಜದ, ಶ್ರೇಯಸ್ಸು. ಭಾಷೆ ಎನ್ನುವುದು ಮಾನವರ ಪರಸ್ಪರ ಸಂಪರ್ಕಕ್ಕೆ ಸಾಧನ. ಸಾಹಿತ್ಯ ಎನ್ನುವುದು ಭಾಷೆಯ ಸುಂದರತಮ ರೂಪ ; ಅದು ಆಲೋಚನೆಯಿಂದ ಶ್ರೀಮಂತವಾದ ಭಾವಕ್ಕೂ ಭಾವದಿಂದ ಶ್ರೀಮಂತವಾದ ಆಲೋಚನೆಗೂ ಅಭಿವ್ಯಕ್ತಿ ಕೊಡುತ್ತದೆ. ಈ ಸಾಹಿತ್ಯವೂ ಕೂಡ ಸಾಧನವೇ. ಅದು ತನ್ನ ಕರ್ತವ್ಯವನ್ನು ನಿರ್ವಹಿಸಬೇಕಾದರೆ ನಾವು ಅದನ್ನು ಪುಷ್ಟವಾಗಿಸಬೇಕು. ಕನ್ನಡ ಪುಷ್ಟವಾಗಬೇಕಾದರೆ ಅದನ್ನು ಎಲ್ಲ ಕ್ಷೇತ್ರಗಳಲ್ಲೂ ಬಳಸಬೇಕು.

**ಪ್ರೊ|| ಎ. ಎನ್. ಮೂರ್ತಿರಾವ್**

---

# ಆತ್ಮಹತ್ಯೆ : ಸಾಮಾಜಿಕ ವಿಶ್ಲೇಷಣೆ

ಡಾ॥ ಎಂ. ಎಸ್. ವಿಘ್ನೇಶ್

ಆತ್ಮಹತ್ಯೆ ಮೇಲ್ನೋಟದರದಲ್ಲಿ ಶೀರಾ ವೈಯಕ್ತಿಕ ವಿಚಾರವಾಗಿ ತೋರಿದರೂ ಇದರ ಸಂಭವನೀಯತೆ ಆಯಾ ಸಮಾಜದ ವಿಘಟನೆಯ ಸ್ವರೂಪ. ಆತ್ಮಹತ್ಯೆ, ಸಾಮಾನ್ಯ ವ್ಯಕ್ತಿ ಅಪಸಾಮಾನ್ಯ ಸಾಮಾಜಿಕ ಸ್ಥಿತಿಯಿಂದ ಪಲಾಯನ ಗೈಯುವ ಸೂತ್ರ ಎಂದು ಹೇಳಬಹುದು. ಈ ಅಸ್ತ್ರವನ್ನು ವ್ಯಕ್ತಿ ತನ್ನ ವಾಸ್ತವಿಕ ಬದುಕಿನಿಂದ ಪಲಾಯನ ಮಾಡುವ ದಾರಿಯಾಗಿ ಬಳಸಲೂಬಹುದು, ಅಥವಾ ತನ್ನ ಪರಿಸರದ ವೌಲ್ಯ, ಪರಂಪರೆ ಮತ್ತು ಸ್ಥಿತಿಗಳ ಬಲಿಪಶುವಾಗಿ ಇದರ ವಿರುದ್ಧ ಬಳಸಲೂ–ಬಹುದು. ಆತ್ಮಹತ್ಯೆ ಸಾಮಾಜಿಕ–ಮಾನಸಿಕ ಅಸಂಘಟನೆಯ ಅಭಿವ್ಯಕ್ತತೆ. [1]

ಮಾನವನ ಇಚ್ಛೆಗಳು ಒಂದಕ್ಕೊಂದು ಸಂಕೀರ್ಣ ಸಂಬಂಧವನ್ನು ಹೊಂದಿದೆ. ಇದು ಪರಸ್ಪರ ಅವಲಂಬನೆಯ ಸೂತ್ರದ ಮೇಲೆ ಆಧಾರಿತವಾಗಿದೆ. ಸಂಬಂಧ, ಸಂಕೀರ್ಣ ಬದುಕು ಮತ್ತು ನಿರೀಕ್ಷಣೆ ಇವು ಜೀವನದ ನಿರಂತರ ಕ್ರಿಯಾಗುಣ. ಸಂಕೀರ್ಣತೆ ಮತ್ತು ನಿರೀಕ್ಷಣೆಯ ತಂತುವಿನಲ್ಲಿ ಗೊಂದಲವಾದಾಗ ವ್ಯಕ್ತಿ ಆತ್ಮಹತ್ಯೆಗೆ ಪ್ರಯತ್ನಿಸ ಬಹುದು, ಅಥವಾ ಯಾವುದೋ ಒಂದು ಹಂತದಲ್ಲಿ ಕ್ಷಣಿಕ ತೀರ್ಮಾನಕ್ಕೆ ಬದ್ಧನಾಗಿ ಸಾಯಲೂಬಹುದು. ಈ ಕ್ರಿಯೆ ಮೂಲತಃ ಪೀಡಿನ ಪ್ರತೀಕ. ಫ್ರಾಯಿಡನ ಪ್ರಕಾರ ಆತ್ಮಹತ್ಯೆಗೂ ಮನುಷ್ಯನ ಸುಪ್ತ ಸಾವಿನ ಬಯಕೆಗೂ ಸಂಬಂಧವಿದೆ. [2] ತಾನು ಸಾಯ ಬೇಕು, ಕೊಲ್ಲಲ್ಪಡಬೇಕು, ತಾನೇಕೆ ಬದುಕಬೇಕು ? ಈ ರೀತಿಯ ಸುಪ್ತ ಚಿಂತನೆ ಗೊಳಗಾದ ವ್ಯಕ್ತಿ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆಂದು ಕಾರ್ಲ್ ಮೆನಿಂಜರ್ ನ ವಾದ.[3] ಮನೋವಿಜ್ಞಾನಿಗಳು ಆತ್ಮಹತ್ಯೆಗೂ ವ್ಯಕ್ತಿಯ ಮನೋದೌರ್ಬಲ್ಯತೆ, ಮಾನಸಿಕ ತುಮುಲ, ಆತಂಕ, ಖಿನ್ನತೆ, ಅನಿಶ್ಚಿತತೆ ಮತ್ತು ಗೊಂದಲಗಳಿಗೂ ಸಂಬಂಧ ವನ್ನು ಕಲ್ಪಿಸಿ ಈ ಸಮಸ್ಯೆಯನ್ನು ಶೀರಾ ವೈಯಕ್ತಿಕ ಚೌಕಟ್ಟಿನಲ್ಲಿ ನಿರೂಪಿಸಲು ಪ್ರಯತ್ನಿಸಿದ್ದಾರೆ. ಸಮಾಜಶಾಸ್ತ್ರಜ್ಞರು ಇದಕ್ಕಿಂತ ಭಿನ್ನವಾಗಿ ವ್ಯಕ್ತಿ ಮತ್ತು ಅವನ ಸಾಮಾಜಿಕ-ಸಾಂಸ್ಕೃತಿಕ ಪರಿಸರಗಳನ್ನು ಪ್ರಧಾನವಾಗಿಟ್ಟುಕೊಂಡು ಈ ಸಮಸ್ಯೆಯನ್ನು ಅಧ್ಯಯನ ಮಾಡಿದ್ದಾರೆ. ಪ್ರಮುಖವಾಗಿ ಸಾಮಾಜಿಕ ರಚನೆ, ಸಮಾಜೀಕರಣ, ಪರಂಪರಾಗತ ಧಾರ್ಮಿಕ ಹಾಗೂ ಸಾಂಸ್ಕೃತಿಕ ವ್ಯವಸ್ಥೆಯ ಚೌಕಟ್ಟಿನಲ್ಲಿ ಆತ್ಮಹತ್ಯೆ ಯನ್ನು ಅಧ್ಯಯನ ಮಾಡಿದ್ದಾರೆ.

ವ್ಯಕ್ತಿ ಪ್ರಧಾನ ಹಾಗೂ ಲೌಕಿಕ ಹಂದರದ ಸಾಮಾಜಿಕ ವಿನ್ಯಾಸದಲ್ಲಿ ಆತ್ಮ ಹತ್ಯೆಯ ಪ್ರಮಾಣ ಹೆಚ್ಚು. ಇಂತಹ ಸಮಾಜದಲ್ಲಿ ವ್ಯಕ್ತಿ ಪರಕೀಯತಾ ಮನೋಭಾವ ದಲ್ಲಿ ಸಾಮಾಜಿಕ ಹಾಗೂ ಸಮೂಹ ಸಂಬಂಧದಿಂದ ವಂಚಿತನಾಗುತ್ತಾನೆ. ಇದು

ಒಂದು ರೀತಿ ಸ್ವಾರ್ಥ ಪ್ರವೃತ್ತಿಯ (ಮೂಲಸ್ಥಿತಿಯ) ಪರಕಾಷ್ಠತೆ. ಈ ಸ್ಥಿತಿಯಲ್ಲಿ ಆತ ತನ್ನ ಸಮುದಾಯದೊಡನೆ ಹೊಂದಾಣಿಕೆ ಮಾಡಿಕೊಳ್ಳಲಾರದೆ, ಅಥವಾ ಆ ಭ್ರಮೆಯಲ್ಲಿಯೇ ತನ್ನ ಅಸ್ತಿತ್ವಕ್ಕೆ ತಾನೇ ಸವಾಲನ್ನೆಸಗುತ್ತಾನೆ. ಈ ಹಂತದಲ್ಲಿ 'ತಾನೇಕೆ ಸಾಯಬಾರದು' ? ಎನ್ನುವ ಸುಪ್ತ ಮನೋದೌರ್ಬಲ್ಯಕ್ಕೊಳಗಾಗಿ ಸಾಯು ತ್ತಾನೆ. ಇದು ಹಂತ ಹಂತವಾಗಿ ನಡೆಯುವಕ್ರಿಯೆ. ವ್ಯಕ್ತಿ ತಾನೇ ನಿರ್ಮಿಸಿಕೊಂಡ ಭ್ರಮಾತ್ಮಕ ವ್ಯವಸ್ಥೆಯೊಡನೆ ಪರಂಪರಾಗತ ಸಾಮಾಜಿಕ ಕ್ರಿಯೆ-ಪ್ರಕ್ರಿಯೆಯೊಂದಿಗೆ ಸ್ಪರ್ಧೆಗೆ ಇಳಿಯುತ್ತಾನೆ. ಇದು ಅಪಸಾಮಾನ್ಯ ವ್ಯಕ್ತಿತ್ವದ ಲಕ್ಷಣ. [3] ಇಂತಹ ವ್ಯಕ್ತಿಗಳ ಜೀವನ ಆತ್ಮಹತ್ಯೆಯಲ್ಲಿ ಪರ್ಯಾವಸಾನವಾಗುತ್ತದೆ. ನಗರೀಕೃತ ಕೈಗಾರೀಕಾ ಪ್ರಧಾನ ಸ್ಪರ್ಧಾತ್ಮಕ ಸಮಾಜದಲ್ಲಿ ಈ ರೀತಿಯ ಕ್ರಿಯೆ ಅದಿಕ. ಲೌಕಿಕ ಪ್ರಧಾನವಾದ ನಗರೀಕೃತ (ಪಾಶ್ಚಾತ್ಯ) ಸಮಾಜದಲ್ಲಿ ಸಮೂಹ ಬಂಧ ಶಿಥಿಲ ಗೊಂಡಿರುತ್ತದೆ. ಸಾರ್ವತ್ರಿಕ ಮೌಲ್ಯ, ಕ್ರಿಯೆ ಹಾಗೂ ಪರಂಪರೆಗಳ ಕೊರತೆ ಇರುತ್ತದೆ. ಅಥವಾ ಈ ನಿಯಂತ್ರಣಗಳಿಂದ ವ್ಯಕ್ತಿ ಹೊರಗಿರಲು ಅವಕಾಶವಿರುತ್ತದೆ. ಸುಪ್ತವಾದ ತನ್ನ ಬದುಕನ್ನೇ ಪ್ರಧಾನವಾಗಿಸಿ ಅದರ ಸುತ್ತ ವೈಯಕ್ತಿಕ ನಿರೀಕ್ಷಣೆಗಳ ಬಲೆಯನ್ನು ನಿರ್ಮಿಸಲು ಪ್ರೇರೇಪಿಸುವ ಲೌಕಿಕ ಅಥವಾ ವೈಯಕ್ತಿಕ ಸಮಾಜದಲ್ಲಿ ಸ್ವಾಭಾವಿಕ ವಾಗಿ ಆತ್ಮಹತ್ಯೆಯ ಪ್ರಮಾಣ ಹೆಚ್ಚು. ಇದು ಒಂದು ರೀತಿಯ 'ಸ್ವಾರ್ಥಪರ' ಆತ್ಮ ಹತ್ಯೆ. [4] ಉದಾಹರಣೆಗೆ ನಗರೀಕೃತ ಕೈಗಾರಿಕಾ ಪ್ರಧಾನ ಸಮಾಜದಲ್ಲಿ ಪ್ರತಿ ಒಂದು ಲಕ್ಷ ಜನರಿಗೆ ಹದಿಮೂರು ಆತ್ಮಹತ್ಯೆಗಳಾಗುತ್ತವೆ. ಆದರೆ ಗ್ರಾಮೀಣ ಸಮಾಜದಲ್ಲಿ ಈ ಸಂಖ್ಯೆ ಕೇವಲ ಎರಡು.[5] ಗ್ರಾಮೀಣ ಸಮಾಜ ಸಾಮುದಾಯಿಕ ಚೌಕಟ್ಟಿನಲ್ಲಿ ವ್ಯಕ್ತಿಗಳನ್ನು ಸಮಾಜೀಕರಿಸುತ್ತದೆ. ಇಲ್ಲಿ ತಾನು, ತನ್ನ ಅಸ್ತಿತ್ವ, ಇದಕ್ಕಿಂತಲೂ ನಾವು, ನಮ್ಮ ಸ್ಥಿತಿಗತಿ; ಇವು ಪ್ರಧಾನವಾಗುತ್ತವೆ. ಇದು ಸಾಮುದಾಯಿಕ ನಿರೀಕ್ಷಣೆ. ಪರಂಪರಾ ಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ವ್ಯಕ್ತಿಯ ಅಸ್ಥಿತ್ವ ಸಮುದಾಯ ನಿರೀಕ್ಷಣೆಯ ಮೂರ್ತ ರೂಪ. ಈ ವ್ಯವಸ್ಥೆಯಲ್ಲಿ ಬದುಕು ವೈವಿಧ್ಯಮಯ ಸಂಬಂಧ ಗಳೊಂದಿಗೆ ಒಪ್ಪಂದವನ್ನು ಮೈಗೂಡಿಸಿಕೊಂಡಿರುತ್ತದೆ– ತನ್ನ ಸಾಮಾಜಿಕ ಸ್ಥಿತಿ ಯೊಡನೆ ಬದುಕನ್ನು ನಿರ್ಮಿಸಿಕೊಳ್ಳುತ್ತಾನೆ. ಆದ್ದರಿಂದ ಇಂತಹ ಸಮಾಜದಲ್ಲಿ ಆತ್ಮ ಹತ್ಯೆಯ ಪ್ರಮಾಣ ಕಡಿಮೆ ಇರುತ್ತದೆ.

ಆತ್ಮಹತ್ಯೆಯನ್ನು ಪಾವಿತ್ರ್ಯಗೊಳಿಸುವ ಸೈದ್ಧಾಂತೀಕರಿಸುವ, ತನ್ಮೂಲಕ ಈ ಕ್ರಿಯೆಯನ್ನು ಸಂಸ್ಥಾತ್ಮಕ ವ್ಯವಸ್ಥೆಗೆ ಸೇರಿಸುವ ಸಮಾಜದಲ್ಲಿ ಆತ್ಮಹತ್ಯೆಯ ಪ್ರಮಾಣ ಅಧಿಕ. ಉದಾಹರಣೆಗೆ ಪ್ರಾಚೀನ ರೋಂನಲ್ಲಿ ಸೋತ ಸೈನಿಕರು ಆತ್ಮಹತ್ಯೆ ಮಾಡಿ ಕೊಳ್ಳುವುದು ಪವಿತ್ರ ಕರ್ತವ್ಯವಾಗಿತ್ತು. ಇದೇ ರೀತಿ ಹಿಂದೂ ಸಮಾಜದ ಸತಿ ಪದ್ಧತಿ. ಈ ಕ್ರಿಯೆಯನ್ನು ಪೂಜಿಸುವ ತಾತ್ವಿತ ಧೋರಣೆಯ ಸಂಸ್ಥಾತ್ಮಕ ವ್ಯವಸ್ಥೆಗಳನ್ನು ವ್ಯಕ್ತಿಗಳಲ್ಲಿ ಮೈಗೂಡಿಸುವ ಸಮಾಜೀಕರಣದ ವ್ಯವಸ್ಥೆಯನ್ನು ಕಾಣಬಹುದು. ಈ ರೀತಿಯ (ಹಿಂದೂ) ಸಮಾಜಗಳಲ್ಲಿ ಅಸ್ಥಿತ್ವಕ್ಕಿಂತಲೂ ಮಿಗಿಲಾಗಿ ಪರಂಪರೆ,

ಧಾರ್ಮಿಕ ಹಾಗೂ ಚಾರಿತ್ರಿಕ ಮೌಲ್ಯಗಳಿಗೆ ಪ್ರಾಮುಖ್ಯ ಹೆಚ್ಚು. ಇಲ್ಲಿ ಸಾವು ಸಾಮಾಜಿಕ-ಸಾಮುದಾಯಕ ಕ್ರಿಯೆಯಾಗಿ ಮಾತ್ರ ಉಳಿಯುತ್ತದೆ. ಒಂದು ಸಮಾಜದ ಧರ್ಮಕ್ಕೂ ಆತ್ಮಹತ್ಯೆಗೂ ಇರುವ ಸಂಬಂಧ ಇದಕ್ಕೊಂದು ಉದಾಹರಣೆ. ಮುಸಲ್ಮಾನ, ಯಹೂದಿ, ಮತ್ತು ಕ್ಯಾಥೋಲಿಕ್ ಸಮಾಜಗಳಲ್ಲಿ ಆತ್ಮಹತ್ಯೆಯ ಪ್ರಮಾಣ ಕಡಿಮೆ. ಈ ಧರ್ಮಗಳು ಆತ್ಮಹತ್ಯೆಯನ್ನು 'ಮೂಲಪಾಪ', 'ಪಾಪದ ಪರಕಾಷ್ಠತೆ' ಎನ್ನುವಷ್ಟರ ಮಟ್ಟಿಗೆ ವ್ಯಕ್ತಿಗಳನ್ನು ಸಮಾಜೀಕರಿಸುತ್ತವೆ. ಇದಲ್ಲದೆ ಲೌಕಿಕ ಮತ್ತು ವ್ಯವಹಾರಿಕ ಬದುಕಿಗೆ ದ್ವಿತೀಯ ಸ್ಥಾನ ಕೊಡುವ ಈ ಧರ್ಮಗಳು ಅಲೌಕಿಕ ಹಾಗೂ ತಾತ್ವಿಕ ಮೌಲ್ಯಗಳ ಸುತ್ತ ವ್ಯಕ್ತಿಯ ಸಂಬಂಧವನ್ನು ಅಂತರ್ಯಗೊಳಿಸುತ್ತದೆ. ಪ್ರಾಟೆಸ್ಟೆಂಟ್ ಸಮಾಜದಲ್ಲಿ ಆತ್ಮಹತ್ಯೆಯು ಸಂಖ್ಯೆ ಕ್ಯಾಥೋಲಿಕ್ ಗಿಂತಲೂ ಅಧಿಕ. ಪ್ರಾಟೆಸ್ಟೆಂಟ್ ಮತ ಮನುಷ್ಯನ ಭೌತಿಕ ಹಾಗೂ ಸ್ವಾರ್ಥಪರ (ego) ಚಿಂತನೆಗೆ ಒತ್ತು ಕೊಡುವುದು ಗಮನಿಸಬೇಕಾದ ಅಂಶ.[6] ಕ್ಯಾಥೋಲಿಕ್ ಧರ್ಮ ಸಮೂಹಬಂಧ ಮತ್ತು ನಿರೀಕ್ಷಣೆಗೆ ಪ್ರಾಮುಖ್ಯತೆ ಕೊಟ್ಟರೆ ಪ್ರಾಟೆಸ್ಟೆಂಟ್ ವ್ಯಯುಕ್ತಿಕ ಕ್ರಿಯೆ ಹಾಗೂ ಲೌಕಿಕ ಭೋಗ ಮತ್ತು ಅನುಭೋಗಕ್ಕೆ ಪ್ರಾಶಸ್ತ್ಯ ಕೊಡುತ್ತದೆ. ಜೀವನ ಪವಿತ್ರ; ಜೀವದಾತ ದೇವರು ಮಾತ್ರ ಇದನ್ನು ತೆಗೆಯಲು ಹಕ್ಕುದಾರ. ಈ ಸಿದ್ಧಾಂತ ಕ್ಯಾಥೋಲಿಕ್ ಸಮಾಜದಲ್ಲಿ ಅಂತರ್ಯಗೊಂಡಿದೆ. ಇಲ್ಲಿ ಜೀವಕೇಂದ್ರ ಬದುಕನ್ನು ಸಮುದಾಯದ ವ್ಯವಸ್ಥೆಯಲ್ಲಿ ಕಾಣಬಹುದು. ಹಿಂದೂ ಸಮಾಜದಲ್ಲಿ–ಪ್ರಮುಖವಾಗಿ ಮೇಲುಜಾತಿ ಯಲ್ಲಿ ಆತ್ಮಹತ್ಯೆಯ ಪ್ರಮಾಣ ಅಧಿಕ. ಈ ಜಾತಿಯಲ್ಲಿನ ಸಾಮಾಜಿಕ ಕಟ್ಟುಪಾಡು, ಮೌಲ್ಯ, ಸಿದ್ಧಾಂತಗಳು ಒಂದು ಹಂತದ ಸ್ಥಾನ ಮಾನವನ್ನು ವ್ಯಕ್ತಿಗಳಲ್ಲಿ ಮೈಗೂಡಿ ಸಿರುತ್ತದೆ. ಈ ವ್ಯವಸ್ಥೆಯೊಡನೆ ಹೊಂದಿಕೊಳ್ಳಲಾರದ ಬದಲಾವಣೆಯ ಸ್ಥಿತಿಯಲ್ಲಿ (ಅಸಹಾಯಕತೆ) ವ್ಯಕ್ತಿ ಆತ್ಮಹತ್ಯೆಗೆ ಪ್ರಯತ್ನಿಸಬಹುದು. ಒಂದು ಅಧ್ಯಯನದ ಪ್ರಕಾರ ಮೇಲು ಜಾತಿಯ ಯುವ ವಿಧವೆಯರಲ್ಲಿ, ವಿಚ್ಛೇದನ ಹೊಂದಿದ ಹೆಂಗಸರಲ್ಲಿ, ಅಂತರ ಜಾತಿಯಲ್ಲಿ ಮದುವೆಯಾದ ಹೆಂಗಸರಲ್ಲಿ ಆತ್ಮಹತ್ಯೆಯ ಪ್ರಮಾಣ 42%.[7] ಇದೇ ರೀತಿ ಪಾಶ್ಚಾತ್ಯ ಸಮಾಜದಲ್ಲಿ ವರ್ಗವ್ಯವಸ್ಥೆಗೂ ಆತ್ಮಹತ್ಯೆಗೂ ಅನುಲೋಮ ಸಂಬಂಧ ವಿರುವುದು ಕಂಡುಬಂದಿದೆ. (ಮೇಲು ಮತ್ತು ಮಧ್ಯಮ ವರ್ಗದವರಲ್ಲಿ ಇದರ ಪ್ರಮಾಣ ಅಧಿಕ) ವಿಶಿಷ್ಟ ಸಾಮಾಜಿಕ ರೀತಿ ಮತ್ತು ಸ್ಥಾನಮಾನಗಳ ಬಿಗಿ ವ್ಯವಸ್ಥೆಯಲ್ಲಿ ಆವೃತ್ತ ವಾದ ವರ್ಗ ಅಥವಾ ಜಾತಿ, ತನ್ನದೇ ಆದ ಜೀವನಮಟ್ಟನನ್ನು ರೂಪಿಸಿಕೊಂಡು ಅದನ್ನೇ ಮಾನದಂಡವಾಗಿ ಉಪಯೋಗಿಸಿ ಇನ್ನುಳಿದ ಕೆಳವರ್ಗ ಅಥವಾ ಜಾತಿಗಿಂತ ಮೇಲ್ಮಟ್ಟದಲ್ಲಿದೆ ಎಂದು ಭ್ರಮಿಸುತ್ತದೆ. ಈ ಜೀವನ ವ್ಯವಸ್ಥೆಗೆ ಧಃಕ್ಕೆ ಉಂಟಾದಾಗ ವ್ಯಕ್ತಿ ಅಥವಾ ಸಮೂಹ ಆತ್ಮಹತ್ಯೆ ಮಾಡಿಕೊಳ್ಳಬಹುದು. ಮುಸಲ್ಮಾನರ ಆಕ್ರಮಣ ಕಾಲದಲ್ಲಿ ಕಾಶಿಯಲ್ಲಿ ಪುರೋಹಿತ ವರ್ಗದಲ್ಲಿ ಆತ್ಮಹತ್ಯೆಯ ಪ್ರಮಾಣ ಅಧಿಕವಾಗಿತ್ತು ಇದೇ ರೀತಿ 1930ರ 'ಆರ್ಥಿಕ ಅಧೋಗತಿಯ' ಪರ್ವ ಕಾಲದಲ್ಲಿ ಅಮೇರಿಕಾ ಹಾಗೂ

ಇಂಗ್ಲೆಂಡ್ ದೇಶದ ಮೇಲು ಮತ್ತು ಮಧ್ಯಮವರ್ಗದವರಲ್ಲಿ ಆತ್ಮಹತ್ಯೆಯು ಅಧಿಕವಾಗಿತ್ತು. [8]

ಸಾಮಾಜಿಕ ಬದಲಾವಣೆಯ ಸಂಧಿಕಾಲದಲ್ಲಿ ಆತ್ಮಹತ್ಯೆಯ ಪ್ರಮಾಣ ಗಮನಾರ್ಹವಾಗಿರುತ್ತದೆ. (ರಾಜಕೀಯ, ಧಾರ್ಮಿಕ, ಆರ್ಥಿಕ ಮುಂತಾದ ಬದಲಾವಣೆಯ ಕಾಲದಲ್ಲಿ.) ಸಮಾಜದ ವಿಶಿಷ್ಠ ಅನೂಚಾನ ವ್ಯವಸ್ಥೆಗೆ ಬದ್ಧನಾದ ವ್ಯಕ್ತಿಯು ಜೀವನ ಆ ಕೇಂದ್ರದ ಸುತ್ತ ಹೆಣೆದು ಕೊಂಡಿರುತ್ತದೆ. ಮಧ್ಯಬಿಂದುವಿನಲ್ಲೇ ವಿಪ್ಲವ ಪ್ರಾರಂಭವಾದರೆ ಅವನ ಸಂಬಂಧದ ಬಲೆ ಹರಿದು ಅಸ್ಥಿರತೆಯು ಹತಾಶ ಭಾವ ಕ್ಕೊಳಗಾಗುತ್ತಾನೆ. ಸಂಧಿಕಾಲದಲ್ಲಿ ಸಾಮಾಜಿಕ ಜೀವನದ ಮೂಲಭೂತ ಪರಿಸ್ಥಿತಿಗಳು ಪರಿಣಾಮಕಾರಿಯಾಗಿ ಪರಿವರ್ತನೆ ಹೊಂದುತ್ತವೆ. ಸಂಬಂಧಗಳ ಕ್ರಿಯೆಯಲ್ಲಿ ಹೊಸ ಸಮಸ್ಯೆಗಳು ಉದ್ಭವಿಸುತ್ತವೆ. ಈ ಕಾಲದಲ್ಲಿ ವ್ಯಕ್ತಿ ಬದಲಾವಣೆಗೆ ಬದ್ಧನಾಗಬಹುದು. ಅಥವಾ ಸೆಳವಿನ ವಿರುದ್ಧ ದಿಕ್ಕಿನಲ್ಲಿ ಈಜಲು ಪ್ರಯತ್ನಿಸಿ ಅಸಹಾಯಕನಾಗಿ ಆತ್ಮಹತ್ಯೆ ಮಾಡಿಕೊಳ್ಳಲೂ ಬಹುದು. ಸಾಮಾನ್ಯವಾಗಿ 50ರ ಮೇಲಿನ ವಯೋಮಾನದವರಲ್ಲಿ ಆತ್ಮಹತ್ಯೆಯ ಪ್ರಕರಣ ಹೆಚ್ಚು. [9] ತನ್ನದೇ ಆದ ಭಾವನಾತ್ಮಕ, ಅಂತಸ್ಥ ದೃಷ್ಟಿಯಲ್ಲಿ ಬದಲಾವಣೆಯ ಸ್ಥಿತಿಯನ್ನು ಅಳೆಯುತ್ತಾರೆಯೇ ವಿನ: ಹೊಂದಿಕೊಳ್ಳುವುದಿಲ್ಲ. ಪ್ರತಿಯೊಂದು ಹಂತದಲ್ಲಿಯೂ ತಿಳಿಯುವುದು ಅಥವಾ ಭ್ರಮಿಸುವುದು ಗೊಂದಲ, ಸಮಸ್ಯೆ, ಹಾಗೂ ಮೌಲ್ಯಗಳ ಕುಸಿತ. ಈ ಕ್ರಿಯೆಯನ್ನು ಎದುರಿಸಲಾಗದೆ ಒಪ್ಪಂದವನ್ನೂ ಮಾಡಿಕೊಳ್ಳಲಾಗದ ಈ ವಯೋಮಾನದ ವ್ಯಕ್ತಿಗಳು ಆತ್ಮಹತ್ಯೆ ಮಾಡಿಕೊಳ್ಳಬಹುದು. ಹೆಂಗಸರಿಗಿಂತ ಗಂಡಸರಲ್ಲಿ ಆತ್ಮಹತ್ಯೆಯ ಪ್ರಕರಣ ಅಧಿಕ. [10] ಯುದ್ಧ ಹಾಗೂ ರಾಜಕೀಯ ಮತ್ತು ಆರ್ಥಿಕ ವಿಪ್ಲವದ ಕಾಲದಲ್ಲಿಯೂ ಆತ್ಮಹತ್ಯೆಯ ಪ್ರಮಾಣ ಅಧಿಕ.

ಆತ್ಮಹತ್ಯೆ ಹತಾಶೆಯ, ದೌರ್ಬಲ್ಯದ ಮತ್ತು ವಿಫಲ ನಿರೀಕ್ಷಣೆಯ ಅಂತಿಮ ಘಟ್ಟ. ಈ ಕ್ರಿಯೆ ಮನುಷ್ಯನ ಮನಸ್ಸು, ವ್ಯಕ್ತಿತ್ವ ಹಾಗೂ ಭಾವನೆಗಳಿಗೆ ಸಂಬಂಧಿಸಿದೆ. ಆದರೆ ಈ ಮಾನಸಿಕ ಗುಣಗಳು ಅವನ ಸಾಮಾಜಿಕ ಹಾಗೂ ಕೌಟುಂಬಿಕ ಪರಿಸರದ ಪ್ರತಿಬಿಂಬ. ಸಾಮಾನ್ಯವಾಗಿ ಸಂಪ್ರದಾಯ ಬದ್ಧ ಸಮಾಜದಲ್ಲಿ ಮಕ್ಕಳಿಲ್ಲದವರ ಆತ್ಮಹತ್ಯೆಯ ಪ್ರಮಾಣ ಅಧಿಕ. ಇದು ಕೇವಲ ಮನೋದೌರ್ಬಲ್ಯದ ಪ್ರತೀಕವಾಗಿರದೆ ಕೀಳರಿಮೆಯ ಭಾವನೆಯೂ ಹೌದು.

ಮಾನವ ಸ್ವಭಾವವನ್ನು ಎರಡು ದೃಷ್ಟಿಕೋನಗಳಿಂದ ನೋಡಬಹುದು. ಒಂದು ದೃಷ್ಟಿಯಲ್ಲಿ ಮಾನವ ಸ್ವಭಾವವು ಸಾಮಾಜಿಕ ಒತ್ತಡ ಮತ್ತು ಶಿಸ್ತುಗಳಿಗೆ ಒಳಗಾಗಿದ್ದರೂ ಅದು ಇವುಗಳಿಂದ ಬೇರೆಯಾಗಿ ವಾಸ್ತವಿಕ ಅಸ್ತಿತ್ವ ಹೊಂದಿರದೆ ಅಸ್ಪಷ್ಟ ವ್ಯವಸ್ಥಿತವಲ್ಲದ ಗುಣಗಳ ಮೊತ್ತವಾಗಿರುತ್ತದೆ. ಇನ್ನೊಂದು ದೃಷ್ಟಿಯಲ್ಲಿ ಮಾನವ ಸ್ವಭಾವವು ವಾಸ್ತವಿಕವಾಗಿ ತನ್ನ ಬದುಕಿನ ಚೌಕಟ್ಟಿಗಷ್ಟೆ ಸೀಮಿತವಾಗಿರುತ್ತದೆ. ಇಲ್ಲಿ ದ್ವಂದ್ವವ್ಯಕ್ತಿತ್ವ ಬೆಳೆಯುತ್ತದೆ. ಈ ಕ್ರಿಯೆಯಲ್ಲಿ ತನ್ನ ತನವನ್ನೇ ಕಳೆದುಕೊಳ್ಳ

ಬೇಕಾದ ಪರಿಸ್ಥಿತಿಯಲ್ಲಿ ಆತ್ಮಹತ್ಯೆ ಅವನಿಗೊಂದು ನಿರ್ದಿಷ್ಟ ಸೂತ್ರ. ಈ ಕಾರಣ ದಿಂದ ಈ ಸಮಸ್ಯೆಯನ್ನು ಸಾಮಾಜಿಕ-ಮಾನಸಿಕ ಹಿನ್ನಲೆಯಲ್ಲಿ ಅಭ್ಯಾಸ ಮಾಡುವುದು ಸೂಕ್ತ.


1. Emile Durkheim; "Suicide". The Free Press, 1951. Glencoe III. P. 75.
2. Karl Menninger; "Man Against Himself". New York, H. B. & Co. 1938. P 123.
3. J. Allen Beegle. "Suicide". N. York. Norton Company Ltd. 1955. P 419
4. Emile Durkheim: "Suicide". P. 154.
5. W. Widich. S. "Mental Health & Mental Disorder" N. York.Norton Company. P 52.
6. Max Weber: The Protestant Ethich & The Sprit of Capita lism. Unwin University Book. London. 1968. P 156.
7. Dr. K. Mitra. Social Problems. Vikas Publications. 1982. P 56.
8. Gillin & Gillin: The Social Problems. Norton Company Ltd. 1968. P 376.
9. Ibid.
10. ಕೆ. ಎಸ್. ಸೋಮಯ್ಯ: "ಆಧುನಿಕ ಸಮಾಜಶಾಸ್ತ್ರೀಯ ಸಿದ್ಧಾಂತಗಳು". ಮಂಜು ನಾಥ ಪ್ರಕಾಶನ ಮೈಸೂರು. 1980. ಪುಟ, 113–114.


---

ನಮ್ಮ ಭಾಷೆಯನ್ನು ನಮ್ಮ ಜನದ ಶ್ರೇಯಸ್ಸನ್ನೂ ಕುರಿತ ಕಳಕಳಿ ನಮ್ಮಲ್ಲಿ ಯಾವಾಗಲೂ ಇರಬೇಕು. ನಾವು ಪರಿಪೂರ್ಣತೆಯನ್ನು ಸಾಧಿಸಿಲ್ಲ. ಪರಿಪೂರ್ಣತೆ ಎನ್ನುವುದು ನಮ್ಮ ಮುಂದೆ ಕಂಗೊಳಿಸಿ ನಮ್ಮನ್ನು ತನ್ನ ಕಡೆಗೆ ಸೆಳೆಯುತ್ತಿರುವ ಭವ್ಯವಾದ ಆದರ್ಶ. ಆ ಭವ್ಯ ಕಲ್ಪನೆಯ ಮೇಲಿನ ವ್ಯಾಮೋಹ, ಅದನ್ನು ಸಾಧಿಸಲು ಬೇಕಾದ ಶ್ರದ್ಧೆ, ವಿವೇಕ, ಸಂಯಮ, ಕಾರ್ಯತತ್ಪರತೆ–ಇವು ಎಂದೆಂದಿಗೂ ನಮ್ಮಲ್ಲಿ ನೆಲಸಿರಲಿ.

ಪ್ರೊ॥ ಎ. ಎನ್. ಮೂರ್ತಿರಾವ್

---

# ಬಿ. ಪುಟ್ಟಸ್ವಾಮಯ್ಯನವರ ನಿಧನದ ಬಗ್ಗೆ ಕಂಬನಿ

ಡಾ|| ಶಂ. ಮೊಕಾಶಿ–ಪುಣೇಕರ

ಪುಟ್ಟಸ್ವಾಮಯ್ಯನವರ ನಿಧನದ ಬಗ್ಗೆ ಇದು ಕಂಬನಿ. ಅವರನ್ನು ಕಾಣಬೇಕೆಂದು ನಾನು ಸುಮಾರು ಐದು ವರ್ಷ ಚಡಪಡಿಸುತ್ತಿದ್ದೆ. ಮುಂಬೈಯಲ್ಲಿದ್ದಾಗ ಅವರ 'ದ್ವಾ ಸುಪರ್ಣಾ' ಓದಿದ್ದೆ. 1980ರಲ್ಲಿ ಮೈಸೂರಿಗೆ ಬಂದ ನಂತರ ಅವರ ಅತ್ಯದ್ಭುತ ಕೃತಿ, 'ಕ್ರಾಂತಿ ಕಲ್ಯಾಣ' ಓದಿದ ಮೇಲಂತೂ ಅವರನ್ನು ಕಾಣಬೇಕೆಂಬ ಲವಲವಿಕೆ ಅತಿಯಾಯಿತು. ಪತ್ರ ವ್ಯವಹಾರ ಬೆಳೆಯಿತು. ಆದರೆ ಭೇಟಿಯಾಗಲಿಲ್ಲ. ಅವರು ಅಸ್ವಸ್ಥರಿದ್ದ ಸುದ್ದಿಯೂ ತಿಳಿಯಲಿಲ್ಲ. ಆದಾಗ್ಯೂ ನಮ್ಮಿರ್ವರ ನಡುವೆ ಏನೂ ಒಂದು ವ್ಯಂಜನೆ ಸ್ಪಂದಿಸುತ್ತಿತ್ತು. ಕೇವಲ ಮುಖಾಮುಖಿಯಿಂದ ಮುಗಿಯುವ ಸ್ಪಂದನ ಅದಲ್ಲ. ಪೂರ್ವಜನ್ಮದ ಋಣಾನುಬಂಧನೆಂದೇ ಹೇಳಬೇಕು. ಅವರು ದೇವಿ-ಉಪಾಸಕರೆಂದು ಅವರ ಸಂಸ್ಕೃತ ಅನುವಾದಗಳಿಂದ ಸ್ಪಷ್ಟವಾಗುತ್ತದೆ. ನಾನು ಈ ವಿಷಯವನ್ನು ಹೆಚ್ಚು ಓದಿದವನಲ್ಲ. ಸ್ಪಂದ ಶಾಸ್ತ್ರವನ್ನು ಓದಿದವರು ಕವಿಯಾಗಲ್ಲದೆ ಬೇರೆ ಇರಲು ಅಸಾಧ್ಯ, ಎಂಬ ತತ್ವವನ್ನು ಬಲ್ಲೆನಷ್ಟೆ. ದೇವಿಯು ಶೂನ್ಯದಲ್ಲಿ ಐಕ್ಯಳಾದಳೆಂದು, ಆದರೆ ಆದು ಶೂನ್ಯವಾಗಿಯೂ ಅದರಲ್ಲಿ ಅಸ್ತಿತ್ವವು ಲಯರೂಪದಲ್ಲೇ ಇರುವುದೆಂದು ಅವರ ಅನುವಾದದಲ್ಲಿ ಒಂದು ಸಾಲು ಬರುತ್ತದೆ. 'ಅದು ಯಾವ ಅರ್ಥದಲ್ಲಿ ?' ಎಂದು ಪ್ರಶ್ನಿಸಿದ್ದೆ. ಉತ್ತರ ರೂಪವಾಗಿ ಕೈ ಬರಹದ ಒಂದು ಪುಸ್ತಿಕೆಯನ್ನೇ ಕಳಿಸಿ, ಅದರ ಬಗ್ಗೆ ಅಭಿಪ್ರಾಯ ಕಳಿಸಬೇಕೆಂದು ಬರೆದಿದ್ದರು. ದ್ವಿತೀಯ ಮುದ್ರಣವಾದರೆ ಅದನ್ನು ಸೇರಿಸಬೇಕೆಂದು ಅವರ ಆಸೆ ಇತ್ತೇನೋ ? ಅವರ ಕೈಬರಹ ನನಗೆ ಗಡುಚಾದರೂ ಓದಿ ಸಂತೋಷಪಟ್ಟು ಎರಡು ತಿಂಗಳ ನಂತರ ಅದನ್ನು ವಾಪಿಸ್ಸು ಮಾಡಿದೆ. ಪುಟ್ಟಸ್ವಾಮಯ್ಯನವರ ಕೃತಿಗಳು ಅತ್ಯಮೂಲ್ಯವಾದವು. ಅವರ ಎಲ್ಲ ಕಾದಂಬರಿಗಳನ್ನು ಓದಲು ಯತ್ನಿಸಿದ್ದೇನೆ. ಒಂದೆರಡು ಸಾಮಾಜಿಕ ಕಾದಂಬರಿಗಳನ್ನು ಬಿಟ್ಟು, ಐತಿಹಾಸಿಕ ಕಾದಂಬರಿಗಳಲ್ಲಿ ಅವರಿಗೆ ರಾಷ್ಟ್ರೀಯ ಪ್ರಶಸ್ತಿ ಸಾಲದು. ಅಂತ್ರರಾಷ್ಟ್ರೀಯ ಪ್ರಶಸ್ತಿಗೆ ಅರ್ಹರು. ಒಂದನ್ನುಳಿದು ಅವರ ಎಲ್ಲ ಐತಿಹಾಸಿಕ ಕಾದಂಬರಿಗಳೂ ಸಿದ್ಧಕೃತಿ ಕೃತಿಗಳು. "ಎಲ್ಲ ಅಂತ್ರರಾಷ್ಟ್ರೀಯ ಸಿದ್ಧಕೃತಿಗಳನ್ನು ಓದಿ ಈ ಮಾತನ್ನು ಹೇಳುತ್ತೀರಾ? " ಎಂದು ಪ್ರಶ್ನಿಸುವವರಿಗೆ ನನ್ನಲ್ಲಿ ಸಿದ್ಧ ಉತ್ತರವಿದೆ. Literary appreciation is a cognitive act; not a comparative one". ರಸಾಸ್ವಾದನೆಯನ್ನು ಸ್ಪಂದನೆಯಿಂದ ಅಳೆಯುವುದಾದರೆ, ನಾನು ಪುಟ್ಟಸ್ವಾಮಯ್ಯ ಮತ್ತು ಮಾಸ್ತಿಯವರ ಐತಿಹಾಸಿಕ ಕಾದಂಬರಿಗಳಿಗೆ ಕ್ಷಣ ಕ್ಷಣಕ್ಕೆ ಸ್ಪಂದಿಸಿದ್ದೇನೆ. ನನ್ನ ಮಾತು ಇತರರಿಗೆ ಒಪ್ಪಿಗೆಯಾಗಲೀ, ಬಿಡಲಿ, ಅದರ

ಬಗ್ಗೆ ನನಗೆ ಚಿಂತೆಯಿಲ್ಲ. ನಾನೂ ತುಸು ಓದಿದ್ದೇನೆ. ಆದರೆ ಓದನ್ನು ನನ್ನ ಮಾತಿಗೆ ಪುರಾವೆಯಾಗಿ ಇಡಲಾರೆ. ಮಧ್ಯಯುಗೀನ ಜೀವನದ ಉತ್ಕರ್ಷ–ಅಪಕರ್ಷಗಳನ್ನು ಪುಟ್ಟಸ್ವಾಮಯ್ಯ ತಿಳಿದಷ್ಟು ವಿವರವಾಗಿ ಕರ್ನಾಟಕದಲ್ಲೇ ಆಗಲಿ, ಭಾರತದಲ್ಲೇ ಆಗಲಿ, ಜಗತ್ತಿನಲ್ಲೇ ಆಗಲಿ, ಯಾರೂ ಇಲ್ಲವೆಂದು ಹೇಳಲಿಕ್ಕೆ ಅವರು ವರ್ಣಿಸಿದ ಬಿಜ್ಜಳ–ರಾಣಿಯರ ನೆತ್ತದಾಟದ ವರ್ಣನೆಯೇ ಸಾಕು. ಆರೇ ತಿಂಗಳ ಕೆಳಗೆ ತ್ರಿಚೂರಿನಲ್ಲಿ ಕೇರಳ ಸಾಹಿತ್ಯ ಅಕಾಡೆಮಿ ಏರ್ಪಡಿಸಿದ್ದ 'ರಮಣ್ ಪಿಲ್ಲೆ ಶತಾಬ್ಧಿ' ಸೆಮಿನಾರಿನಲ್ಲಿ ಮಾತಾಡುವಾಗ ನಾನು ಹೇಳಿದ್ದೆ. "ರಮಣ್ ಪಿಲ್ಲೆ ಸತ್ತಿಲ್ಲ ಬದುಕಿದ್ದಾರೆ. ಬೆಂಗಳೂರಿನಲ್ಲಿ ಇದ್ದಾರೆ. ಅವರ ಸದ್ಯದ ಹೆಸರು ಬಿ. ಪುಟ್ಟಸಾಮಯ್ಯ !" ಎಂದು. ಅಂಥ ಭವ್ಯ ಕಲಾವಿದನನ್ನು ನಾವು ಕಳೆದುಕೊಂಡಿದ್ದೇವೆ. ಅವರ ಇಡೀ ಜನ್ಮ ಬಡತನದಲ್ಲಿ ಕಳೆಯಿತೆಂದು ಕೇಳಿದ್ದೇನೆ. ಒಂದು ಕಾಲಕ್ಕೆ 'ಕುರುಕ್ಷೇತ್ರ' ನಾಟಕವನ್ನು ಬರೆದು ಖ್ಯಾತಿಗಳಿಸಿದ ನಾಟಕಕಾರರು, ಉತ್ತರ ವಯಸ್ಸಿನಲ್ಲಿ, ವೃತ್ತಿರಂಗ ನಷ್ಟವಾದ ಮೇಲೆ, ಕಾದಂಬರಿಕಾರನಾಗಿ ಅಲೌಕಿಕ ಶ್ರೇಷ್ಠ ಕಾದಂಬರಿಗಳನ್ನು ರಚಿಸಿದ್ದು ಕಲೆಯ ಸೋಜಿಗಗಳಲ್ಲಿ ಒಂದು. ಇನ್ನೂ ಅವರಿಗೆ ತಕ್ಕ ಮರ್ಯಾದೆಯನ್ನು ಕನ್ನಡಿಗರು ಸಲ್ಲಿಸಿಲ್ಲ. ಸತ್ತ ಮೇಲೆ ಮರ್ಯಾದೆ–ಹಮ್ಮಿಣಿ–ಮೂರ್ತಿಶಿಲ್ಪಗಳಿಂದ ಅವರಿಗೇನಾಗಬೇಕಾಗಿದೆ ? 'ಕ್ರಾಂತಿ ಕಲ್ಯಾಣ' ಓದಿದ ಮೇಲೆ ಹುಚ್ಚನಂತೆ 30 ಸಾಹಿತಿಗಳನ್ನು ಕೇಳಲು, ಹೊರಟೆ-'ನೀವು 'ಕ್ರಾಂತಿಕಲ್ಯಾಣ' ಓದಿದ್ದಿರಾ ?' ಎಂದು 29 ಸಾಹಿತಿಗಳು ಅದನ್ನು ನೋಡಿರಲಿಲ್ಲ. ಒಬ್ಬರು ಮೊದಲನೆಯ ಭಾಗವನ್ನಷ್ಟೇ ಓದಿದ್ದರು. ಕೊನೆಗೆ ಶ್ರೀ ಬಸವಾರಾಧ್ಯರನ್ನು ಕೇಳಿದಾಗ, 'ನಾನು ಓದಿದ್ದೆನೆ. ಸಂಪೂರ್ಣ ಓದಿದ್ದೇನೆ. ಅದನ್ನು ಓದಿದ ಮೇಲೆ ಬೇರೆ ಗ್ರಂಥ ಓದಲು ಮನಸ್ಸಾಗದು." ಎಂದರು. ಈ ವಾಕ್ಯದಿಂದ ಈ ಪುಟ್ಟ ಶ್ರದ್ಧಾಂಜಲಿಯನ್ನು ಅರ್ಪಿಸುತ್ತೇನೆ.

---

ಕನ್ನಡದ ಅಭ್ಯುದಯಕ್ಕೆ ಆಗಬೇಕಾದ್ದೆಲ್ಲ ಆಗಿದೆಯೆ ಎಂಬ ಪ್ರಶ್ನೆಯನ್ನು ನಾವು ಹಾಕಿಕೊಳ್ಳಬೇಕು. ಕೆಲವು ವಾರಗಳ ಹಿಂದೆ ಮೈಸೂರಿನಲ್ಲಿ ಪತ್ರಿಕಾಪ್ರತಿನಿಧಿಗಳೊಡನೆ ಮಾತಾಡುತ್ತಿದ್ದಾಗ ಒಬ್ಬರು "ನಿಮಗೆ ಕನ್ನಡದ ಪ್ರಗತಿಯ ವಿಷಯದಲ್ಲಿ ಸಂತೋಷವಿದೆಯೆ ? ಗುಣ ಪ್ರಮಾಣಗಳೆರಡರ ದೃಷ್ಟಿಯಿಂದಲೂ ನೀವು ತೃಪ್ತರಾಗಿದ್ದೀರ ?" ಎಂದು ಕೇಳಿದರು. ನಾನು ಆಗ ಕೊಟ್ಟ ಉತ್ತರವನ್ನು ಇಲ್ಲಿ ಪುನರಾವರ್ತನೆ ಮಾಡುತ್ತೇನೆ. ಕನ್ನಡ ಇದುವರೆಗೆ ಸಾಧಿಸಿರುವುದನ್ನು ನೋಡಿ ನಾನು ಆಶ್ಚರ್ಯಪಟ್ಟಿದ್ದೇನೆ, ಆನಂದಪಟ್ಟಿದ್ದೇನೆ. ಸೃಜನಶೀಲ ಸಾಹಿತ್ಯದಲ್ಲಿ ಇದುವರೆಗೆ ಬಂದಿರುವ ಬೆಳೆ ಯಾವ ದೇಶದವರಾದರೂ ಹೆಮ್ಮೆ ಪಡಬಹುದಾದಂಥಾದ್ದು; ಆದ್ದರಿಂದ ಆನಂದ. ಆದರೆ ತೃಪ್ತನಾಗಿದ್ದೇನೆಂದು ಹೇಳಲಾರೆ. ಜಡತೆಗೆ ಬಲಿಯಾಗದಂತೆ, ಸದಾ ಕಾರ್ಯನಿರತರಾಗಿರುವಂತೆ ನಮ್ಮನ್ನು ಎಚ್ಚರದಲ್ಲಿಡುವ ಅತೃಪ್ತಿ ಶ್ರೇಯಸ್ಸಿಗೆ ಮೂಲ. ಅದು ಎಲ್ಲರಲ್ಲೂ ಇರಲೇಬೇಕಾದದ್ದು. ಆದರೆ ನನ್ನಲ್ಲಿ ಆದರ ಜೊತೆಗೆ ಬೇರೊಂದು ತೃಪ್ತಿಯು ಸೇರಿದೆ —ಅದರಿಂದ ನನಗೆ ಕನ್ನಡಿಗರ ಶಕ್ತಿಯ ವಿಷಯದಲ್ಲಿ ಅಧೈರ್ಯವೇನೂ ಬಂದಿಲ್ಲ. "ಈ ಕೆಲಸವನ್ನು ನಾವು ಮಾಡಬಲ್ಲೆವು, ಆದರೆ ಇನ್ನೂ ಮಾಡಿಲ್ಲ" ಎಂಬ ತಿಳುವಳಿಕೆಯಿಂದ ಬಂದದ್ದು ಈ ಅತೃಪ್ತಿ.

ಎ. ಎನ್. ಮೂರ್ತಿರಾವ್

---

# ಕರಿಮಣ್ಣಿನ ಗೊಂಬೆಗಳು

ಡಾ॥ ಬಸವರಾಜ ಕಲ್ಗುಡಿ

ಕರಿಗೌಡ ಬೀಚನಹಳ್ಳಿಯವರ ಮೊದಲ ಕಥಾ ಸಂಕಲನವಿದು. ಅನೇಕ ಕಾರಣಗಳಿಂದ ಇಲ್ಲಿನ ಒಂಬತ್ತು ಕಥೆಗಳೂ ಆಸಕ್ತಿಯನ್ನೂ ಕೆರಳಿಸುತ್ತವೆ. ಕಥೆಗಾರನು ತನ್ನ ಕಥಾವಸ್ತುವಿಗೆ ಉದ್ದೇಶಪೂರ್ವಕವಾಗಿ ನಿರ್ದಿಷ್ಟ ಕ್ಷೇತ್ರವನ್ನು ಆಯ್ಕೆ ಮಾಡಿಕೊಂಡಿದ್ದಾನೆ. ಗ್ರಾಮ್ಯ ಬದುಕಿನ ವಾತಾವರಣ ಇಲ್ಲಿನ ಎಲ್ಲ ಕಥೆಗಳ ಪ್ರಧಾನ ವಸ್ತುವಾಗಿದೆ. ಅದರಲ್ಲಿಯೂ ಗ್ರಾಮೀಣ ಬದುಕಿನಲ್ಲಿ ಅತ್ಯಂತ ಕೆಳಸ್ತರದ ಬಡವರ ಚಿತ್ರಣವು ಇಲ್ಲಿನ ಕತೆಗಳ ಮುಖ್ಯ ಲಕ್ಷಣಗಳಾಗಿವೆ. ಬದುಕನ್ನು ನಿರ್ವಹಿಸಲು ಪಡುವಂಥ ಪಾಡು ; ಇಂಥ ಪಾಡುಗಳಲ್ಲಿ ಕಾಣುವ ಛಲ, ನಿರಾಶೆ ಮುಂತಾದ ವಿವರಗಳನ್ನು ಈ ಸಂಕಲನದ ಬಹುಪಾಲು ಕಥೆಗಳು ಚಿತ್ರಿಸುತ್ತವೆ. ಕತೆಗಾರನು–ಅನುಭವದ ಕ್ಷೇತ್ರವನ್ನು ಗಾಢಗೊಳಿಸಲು, ಅತ್ಯಂತ ಸೂಕ್ಷ್ಮ ನೆಲೆಗಳನ್ನು ಕೆದಕಿ ನೋಡಲು, ನಿರ್ದಿಷ್ಟ ಬದುಕಿನ ವಾತಾವರಣವನ್ನು ತನ್ನ ಎಲ್ಲ ಕತೆಗಳ ಹಿನ್ನೆಲೆಯನ್ನಾಗಿ ಮಾಡಿಕೊಂಡಿದ್ದಾನೆ ಎನ್ನುವುದೇ ಮೂಲಭೂತವಾಗಿ ಗಮನಾರ್ಹ ಸಂಗತಿಯಾಗಿದೆ. ಇದು ಮುಖ್ಯವಾದ ಗುಣವಾದರೂ ಪ್ರಾರಂಭ ಮಾತ್ರ. ಇಂಥ ಎಲ್ಲ ಕಥೆಗಳು ಹಿಂದೆ ಒಟ್ಟು ಜೀವನ ದರ್ಶನದ ಬಗ್ಗೆ ಗ್ರಹಿಕೆಯೊಂದು ರೂಪುಗೊಳ್ಳಬೇಕಾದದ್ದು ಅಗತ್ಯವಾದ ಕಾರ್ಯವಾಗಿದೆ. ಆಗಲೇ ಕಥೆಗಾರನು ಆಯ್ಕೆ ಮಾಡಿಕೊಂಡ ವಾತಾವರಣದ ಸಮರ್ಥ ಗ್ರಹಿಕೆಯೊಂದು ಸಾಧ್ಯವಾಗುವುದು.

ಕರೀಗೌಡರ ಈ ಕಥೆಗಳಲ್ಲಿ ಅಂಥ ಗ್ರಹಿಕೆಯೊಂದರ ಕಡೆಗೆ ತುಡಿತವಿದೆಯಾದರೂ ಅದೇ ಮುಖ್ಯವಾದ ಆಶಯವಾಗಿಲ್ಲ. ಬಿಡಿ ಬಿಡಿ ಘಟನೆಗಳಾಗಿಯೇ ಇಲ್ಲಿನ ಕಥೆಗಳು ರೂಪುಗೊಳ್ಳುತ್ತವೆ. ಇವುಗಳ ವಿವರಣೆ ಕಥೆಯ ಪ್ರಧಾನ ಭಾಗವಾಗುವುದರಿಂದ ಅನೇಕ ಕಥೆಗಳು ವಿಸ್ತಾರವಾದ ಮಹಾ ಕಥನವೊಂದರ ಬಿಡಿ ಭಾಗವೆಂಬಂತೆ ತೋರುತ್ತವೆ. ಇಲ್ಲಿನ ಸುಮಾರು ಕತೆಗಳನ್ನು ಮೇಲಿನ ನನ್ನ ಮಾತಿಗೆ ನಿದರ್ಶನವನ್ನಾಗಿ ನೋಡಬಹುದು. 'ಒಂದು ಅಪೂರ್ವ ಸಂಸಾರ' 'ಸಂಬಂಧ' 'ಕಳಕಳಿ' 'ದನಿ' 'ಸಂಗಾತಿಗಳು' ಈ ಎಲ್ಲ ಕತೆಗಳಲ್ಲಿ ಕಂಡು ಬರುವ ನೆರೇಟಿವ್ (Narrative) ನ ತೀವ್ರತೆಯಲ್ಲಿ ಹಾಗೂ ವ್ಯಕ್ತಗೊಳ್ಳುವ ಘಟನೆಗಳಲ್ಲಿ–ಈ ಕಥೆಗಳು ಮತ್ತು ಇಲ್ಲಿನ ಪಾತ್ರಗಳು ಮುಂದಿನ ತಮ್ಮ ಜೀವನ ಯಾತ್ರೆಯ ತುಣುಕೊಂದನ್ನು ಇಲ್ಲಿ ಕೊಟ್ಟಿವೆಯೇನೋ ಎಂದು ಭಾವಿಸುವಂತೆ ಮಾಡಿವೆ. 'ಸಂಗಾತಿಗಳು' ಕಥೆಯ ರಾಮಣ್ಣ ಮತ್ತು ಜಲೀಲಳನ್ನೇ ನೋಡಿ; ಅಜೀದು ಮತ್ತು ಚೆನ್ನಯ್ಯ–ಇವರ ಮನೆತನಗಳ ಪ್ರೀತಿಯು

ಕರಿಗೌಡ ಬೀಚನಹಳ್ಳಿ (ರೂಪಧ್ವನಿ ಪ್ರಕಾಶನ, ಬೆಂಗಳೂರು ಬೆಲೆ ರೂ. 14–00)

ಮೊಳಕೆಯೊಡೆಯುವುದನ್ನೇ ನೋಡಿ -ಇಲ್ಲೆಲ್ಲ ಮುಂದಿನ ಈ ಬಾಂಧವ್ಯ ಹೇಗೆ ಬೆಳೆ ಬೆಳೆಯುವುದೋ ಎನ್ನುವ ಕಾತರವನ್ನು ಓದುಗರ ಮನಸ್ಸಿನೊಳಗೆ ಕೊರೆಯುವಂತೆ ಮೂಡಿಸಿ ಬಿಡುತ್ತದೆ ಈ ಕಥೆ.

ವಿವರಿಸುವ, ಕಥೆ ಹೇಳುವ, ಕಲೆಯು ಕಥೆಗಾರನಿಗೆ ದಕ್ಕಿದೆ ಎನ್ನುವ ಕಾರಣ ದಿಂದಲೇ ಇಲ್ಲಿನ ಕೆಲವು ಕಥೆಗಳ ವಸ್ತು ಸತ್ವಯುತವಾಗಿಲ್ಲದಿದ್ದರೂ ಅವುಗಳು ಒಂದು ಸೊಗಸಾದ ಚಿತ್ರವನ್ನು ಕಟ್ಟಿಕೊಡುತ್ತವೆ. 'ದನಿ' ಸಂಬಂಧ' ಮುಂತಾದ ಕತೆಗಳಲ್ಲಿ ಒಂದು ಹಂತದಲ್ಲಿ ಕಥೆಗಾರನಿಗೆ ಶಿಕ್ಷಣದ ಅಸಂಗತತೆಯನ್ನು ಹೇಳಬೇಕಾಗಿದೆ. ಆದರೆ ಕಥೆಯಲ್ಲಿ ಸಂಪೂರ್ಣವಾಗಿ ಮಾಸ್ತರರ ಕ್ರೌರ್ಯವೇ ಪ್ರಧಾನವಾದ ಕ್ರಿಯೆಯಾಗಿ ರೂಪು ಗೊಳ್ಳುತ್ತದೆ. ಇದು ಕಥೆಯನ್ನು ಸೀಮಿತಗೊಳಿಸಿರುವ ಅಂಶ. ಆದರೆ ಈ ಚಿತ್ರಣವೂ ಸಹ ಕಥೆಗಾರನ ವಿವರಿಸುವ ಸಹಜ ಕಲೆಗಾರಿಕೆಯಿಂದ ಸೆಳೆಯುವ ಭಾಗವಾಗಿ ಬಿಡುತ್ತದೆ.

ಈ ಸಂಕಲನದ ಕತೆಗಳ ಇನ್ನೊಂದು ಮುಖ್ಯ ಲಕ್ಷಣ-ಜೀವನದಲ್ಲಿ ಆದರ್ಶದ ನೆಲೆಗಳನ್ನು ಮುಟ್ಟಬೇಕೆನ್ನುವ ತವಕ. ಜಾತಿಯ ಸೀಮಿತ, ಕ್ರೂರ ಚೌಕಟ್ಟನ್ನು ಮೀರುವ ಬಯಕೆ, ಸಂಬಂಧವನ್ನು ಕ್ರೂರಗೊಳಿಸುವ ಆಸ್ತಿಯ ಬಗ್ಗೆ ನಿರ್ಮೋಹ, ಮನುಷ್ಯನನ್ನು ಅಂಧಃಕಾರದಲ್ಲಿ ಇಡುವ ಮೂಢ ನಂಬಿಕೆಗಳ ವಿರೋಧ—ಹೀಗೆ ಹಲವಾರು ಆದರ್ಶ, ನಂಬಿಕೆಗಳ ಪರವಾಗಿ ಇಲ್ಲಿನ ಅನೇಕ ಕಥೆಗಳು ದುಡಿಯುತ್ತವೆ. ಕರಿಮಣ್ಣಿನ ಗೊಂಬೆಗಳು, ಸಂಗಾತಿಗಳು, ಆಸಕ್ತಿ-ಮೊದಲಾದ ಕಥೆಗಳು ಈ ದೃಷ್ಟಿಯಿಂದ ಗಮ ನಿಸುವಂಥವುಗಳಾಗಿವೆ. ಆಸ್ತಿ ಮತ್ತು ಮನುಷ್ಯನ ಸಂಬಂಧಗಳ ಛಿದ್ರವಾಗು ವಿಕೆ 'ಆಸಕ್ತಿ' ಕಥೆಯಲ್ಲಿ ಅನಿವಾರ್ಯವಾದ ಬೆಳವಣಿಗೆಯೆಂಬಂತೆ ಸಹಜವಾಗಿ ಮೂಡಿ ಬಂದಿದೆ. ಆದರೆ ಉಳಿದೆರಡು ಕಥೆಗಳಲ್ಲಿ ಕಥೆಗಾರನ ಹಠದಿಂದಲೋ ಎಂಬಂತೆ ಮೂಢ ನಂಬಿಕೆ, ಜಾತೀಯತೆಯ ವಿರುದ್ಧದ ನಿಲುವುಗಳು ಕಥೆಯೊಳಗೆ ಸೇರ್ಪಡೆಯಾಗಿವೆ. ಇವುಗಳನ್ನು ಹೇಳುವ ಕಾರಣಕ್ಕಾಗಿಯೇ ಕಥೆಯು ಚೌಕಟ್ಟನ್ನು ಕಟ್ಟಿದ ಹಾಗಿದೆ -ಇಲ್ಲಿನ ವಸ್ತುವಿನ ಚೌಕಟ್ಟು ಹಾಗೂ ಪಾತ್ರಗಳ ಮನೋಭಾವ.

ಇಲ್ಲಿನ ಬಹುಪಾಲು ಕಥೆಗಳು ಒಟ್ಟಾರೆ-ಕಥೆಗಾರನ ಕಥನ ಶೈಲಿಯ ಬಗ್ಗೆ ಭರವಸೆ ಗಳನ್ನು ಮೂಡಿಸುತ್ತವೆ ಕತೆಗಳು ವ್ಯಕ್ತಿಗತ ಪಾತಳಿಯನ್ನು ಮೀರಿ ಜೀವನದರ್ಶನ ವೊಂದರ ಬಗ್ಗೆ ಒಳನೋಟಗಳನ್ನು ಕೊಟ್ಟರೆ ಶ್ರೇಷ್ಠ ರಚನೆಗಳು ಮೂಡುವ ಸಾಧ್ಯತೆ ಗಳು ಇವೆ. ಆ ಬಗ್ಗೆ ಈ ಸಂಕಲನದಲ್ಲಿ, ಕೆಲವು ಸುಳಿವುಗಳು ಕಂಡು ಬರುತ್ತವೆ. ಈ ಸಂಕಲನ ಈ ಕಾರಣದಿಂದ ಸ್ವಾಗತಾರ್ಹವಾಗಿದೆ. ಪ್ರಥಮ ಸಂಕಲನದಲ್ಲೇ ಕಥಾ ರಚನೆಯ ಸತ್ವಯುತ ಶೈಲಿಯನ್ನು ರೂಢಿಸಿಕೊಳ್ಳುತ್ತಿರುವ ಕರೀಗೌಡರು ವಸ್ತುವಿನ ಹಲವು ಆಯಾಮಗಳನ್ನು ಗ್ರಹಿಸಬಲ್ಲರು.

ಕಥಾಸಂಕಲನಕ್ಕೆ ಅತ್ಯಂತ ದುಬಾರಿ ಬೆಲೆಯನ್ನು ಇಟ್ಟ ಪ್ರಕಾಶಕರು ಓದುಗರಿಗೆ ಇದು ಆದಷ್ಟು ತಲುಪದಿರಲು ಪ್ರಯತ್ನಿಸುತ್ತಿದ್ದಾರೆಂದು ಕಾಣುತ್ತದೆ.

# ಹಿಂದುಳಿದವರ ಹಿತರಕ್ಷಣೆ

- ಸರ್ವರಿಗೂ ಸಮಾನ ಅವಕಾಶ; ದೌರ್ಜನ್ಯಗಳಿಂದ ದಲಿತ ವರ್ಗದ ರಕ್ಷಣೆ- ಇದು ಸರ್ಕಾರದ ಗುರಿ.
- ಹರಿಜನ-ಗಿರಿಜನ ಉದ್ಧಾರಕ್ಕಾಗಿ ನೇಮಕಗೊಂಡ ಹರಿಜನ-ಗಿರಿಜನ ಕಾರ್ಪೊರೇಷನ್ ತೀವ್ರ ಕಾರ್ಯನಿರತ.
- ಹಿಂದುಳಿದ ವರ್ಗದವರಿಗೆ ಶಿಕ್ಷಣ ಮತ್ತು ಸರ್ಕಾರಿ ಸೇವೆಯಲ್ಲಿ ಸೂಕ್ತ ಪ್ರಾತಿನಿಧ್ಯ.
- ದ್ವಿತೀಯ ಹಿಂದುಳಿದ ವರ್ಗಗಳ ಆಯೋಗ ಹಾಗೂ ಅಲ್ಪಸಂಖ್ಯಾತ ಆಯೋಗಗಳ ರಚನೆ.
- ದಲಿತರ ಮೇಲೆ ಆಗುವ ದೌರ್ಜನ್ಯಗಳನ್ನು ತಪ್ಪಿಸಲು ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಪೋಲೀಸ್ ಸೂಪರಿಂಟೆಂಡೆಂಟರಿಗೆ ಹೆಚ್ಚಿನ ಅಧಿಕಾರ.
- ಕೋಮು ಗಲಭೆಗಳನ್ನು ಹತ್ತಿಕ್ಕಿ ಸೌಹಾರ್ದತೆಯನ್ನು ಕಾಯಲು ರಾಜ್ಯ ಹಾಗೂ ತಾಲ್ಲೂಕು ಮಟ್ಟದಲ್ಲಿ ಸಮಿತಿಗಳ ರಚನೆ.

No. MAG (2) PQ3 DECL 322/1979-80
ANKANA (Kannada Bi-monthly) January-February 1984

# 'ಅಂಕಣ' ಪ್ರಕಾಶನ
## ಬೆಂಗಳೂರು-560003

ರಾಘವೇಂದ್ರ ಖಾಸನೀಸರ ಕಥೆಗಳು

ಬೆಲೆ : ಹದಿನೈದು ರೂಪಾಯಿ

ವಿಶೇಷ ರಿಯಾಯಿತಿ

ಮುಂಗಡವಾಗಿ ಹತ್ತು ರೂಪಾಯಿಗಳನ್ನು ಎಂ.ಒ / ಚೆಕ್ ರೂಪದಲ್ಲಿ (ಹೊರಗಿನವರು ಎರಡು ರೂಪಾಯಿ ಬ್ಯಾಂಕ್ ಕಮಿಷನ್ ಸೇರಿಸಿ) 'ಅಂಕಣ'ದ ವಿಳಾಸಕ್ಕೆ ಹಣವನ್ನು ಕಳುಹಿಸುವವರಿಗೆ ಪ್ರತಿಗಳನ್ನು ಕಳುಹಿಸಲಾಗುವುದು.

'ಅಂಕಣ'
8, 'ಚಿರಂಜೀವಿ'
ಹಳೇ ಈಜುಕೊಳ ರಸ್ತೆ,
ಕೋದಂಡರಾಮಪುರ,
ಬೆಂಗಳೂರು - 560 003.

Published by C. Srinivasaraju 8 'Chiranjeevi' Old Swimmingpool Road Kodandarampura, Bangalore-560003, Printed at ILA Printers, 153, 4th Main, 8th Cross, Bangalore-560018. Editor A. R. Nirupama.